CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜನವರಿ ೬, ೨೦೦೫ (ಪುಷ್ಯ ೧೬, ಶಕ ವರ್ಷ ೧೯೨೬) | ಸಂಚಿಕೆ ೧ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಶಿಕ್ಷಣ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಇಡಿ 1078 ಇಟಿಆರ್ 2004, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2004**

**ವಿಷಯ:** 2004-05ನೇ ಸಾಲಿನ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಹಾಗೂ ಪದವಿ ಪೂರ್ವ ಕಾಲೇಜುಗಳ ಶಿಕ್ಷಕರು/ಉಪನ್ಯಾಸಕರ ವರ್ಗಾವಣೆಗೆ ಸಂಬಂಧಿಸಿದಂತೆ ನಿರ್ಬಂಧ.

1. 2004-05ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಶಿಕ್ಷಕರು ಹಾಗೂ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರ ವರ್ಗಾವಣೆಗಳು ಈಗಾಗಲೇ ಸಾಕಷ್ಟು ಸಂಖ್ಯೆಯಲ್ಲಿ ಜಾರಿ ಆಗಿರುತ್ತವೆ. ಈ ಸಾಲಿಗೆ ಸಂಬಂಧಿಸಿದಂತೆ ಎರಡನೇ ತ್ರೈಮಾಸಿಕ ಅವಧಿ ಸಹ ಕೊನೆಗೊಳ್ಳುವ ಹಂತದಲ್ಲಿದೆ. ಶಿಕ್ಷಕರ ವರ್ಗಾವಣೆಗಳನ್ನು ಮುಂದುವರೆಸಿದಲ್ಲಿ ಅಥವಾ ಈಗಾಗಲೇ ಆಗಿರುವ ವರ್ಗಾವಣೆಗಳನ್ನು ಅನುಷ್ಠಾನಗೊಳಿಸಿದಲ್ಲಿ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿ ಕುಂಠಿತವಾಗುತ್ತದೆ.

2. ಈ ಹಿನ್ನೆಲೆಯಲ್ಲಿ ಸರ್ಕಾರಿ ಪ್ರಾಥಮಿಕ, ಪ್ರೌಢ ಶಾಲಾ ಶಿಕ್ಷಕರ; ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರು / ಪ್ರಾಂಶುಪಾಲರು; ಮತ್ತು ಎರಡೂ ಇಲಾಖೆಗಳ ಲಿಪಿಕ ವೃಂದದ ನೌಕರ ವರ್ಗಾವಣೆ ಪ್ರಕ್ರಿಯೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಗಿತಗೊಳಿಸಲಾಗಿದೆ. ಈಗಾಗಲೇ ವರ್ಗಾವಣೆಗೊಂಡಿರುವ ಶಿಕ್ಷಕರು / ಉಪನ್ಯಾಸಕರು / ಪ್ರಾಂಶುಪಾಲರು / ಲಿಪಿಕ ವೃಂದದ ನೌಕರರನ್ನು ಶೈಕ್ಷಣಿಕ ವರ್ಷದ ಕೊನೆಯ ದಿನ ಕರ್ತವ್ಯದಿಂದ ಬಿಡುಗಡೆ ಮಾಡಬಹುದು ಎಂದೂ ಸಹ ಈ ಮೂಲಕ ಸೂಚಿಸಲಾಗಿದೆ.

ಬಿ.ಹೆಚ್. ಪಡಸಲಗಿ

ಪಿ.ಆರ್. 1 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ವಿಕಾಸಸೌಧ ಕಟ್ಟಡದಲ್ಲಿ ಸಚಿವಾಲಯದ ಇಲಾಖೆಗಳು ಮತ್ತು ಸಚಿವರುಗಳಿಗೆ ಸ್ಥಳಾವಕಾಶ ಒದಗಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 94 ಡಿಬಿಎಂ 2003, ದಿನಾಂಕ: 4.4.2003.
2. ಆದೇಶ ಸಂಖ್ಯೆ: ಸಿಆಸುಇ 94 ಡಿಬಿಎಂ 2003, ದಿನಾಂಕ: 26.7.2003.
3. ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಮಿತಿಯ ದಿನಾಂಕ: 4.5.2004ರ ನಡವಳಿ.
4. ಆದೇಶ ಸಂಖ್ಯೆ: ಸಿಆಸುಇ 120 ಡಿಬಿಎಂ 2004, ದಿನಾಂಕ: 12.7.2004.

**ಪ್ರಸ್ತಾವನೆ:**

ಹೊಸದಾಗಿ ನಿರ್ಮಾಣಗೊಳ್ಳುತ್ತಿರುವ ವಿಕಾಸ ಸೌಧ ಕಟ್ಟಡದಲ್ಲಿ ಸಚಿವರುಗಳು ಮತ್ತು ಸಚಿವಾಲಯದ ಕಛೇರಿಗಳಿಗೆ ಸ್ಥಳಾವಕಾಶ ಒದಗಿಸುವ ಬಗ್ಗೆ ಶಿಫಾರಸ್ಸು ಮಾಡುವ ಸಂಬಂಧ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಒಂದು ಸಮಿತಿಯನ್ನು ರಚಿಸಲಾಗಿತ್ತು. ಸಮಿತಿಯ ಶಿಫಾರಸ್ಸಿನಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಆದೇಶದಲ್ಲಿ ಹೊಸ ವಿಕಾಸಸೌಧ ಕಟ್ಟಡದಲ್ಲಿ 15 ಸಚಿವರುಗಳು ಮತ್ತು 15 ಸಚಿವಾಲಯದ ಇಲಾಖೆಗಳಿಗೆ ಸ್ಥಳಾವಕಾಶ ಒದಗಿಸಲಾಗಿತ್ತು. ತದನಂತರ ವೈದ್ಯಕೀಯ ಶಿಕ್ಷಣ ಸಚಿವರು ಮತ್ತು ವೈದ್ಯಕೀಯ ಶಿಕ್ಷಣ ಇಲಾಖೆಗೆ ಒದಗಿಸಲಾದ ಸ್ಥಳಾವಕಾಶದಲ್ಲಿ ಮುಖ್ಯ ಮಂತ್ರಿಯವರಿಗೆ ಮತ್ತು ಅವರ ಕೆಲವು ಅಧಿಕಾರಿಗಳಿಗೆ ಸ್ಥಳಾವಕಾಶ ಒದಗಿಸಲು ಮುಖ್ಯ ಮಂತ್ರಿಗಳ ಆದೇಶದಂತೆ ಲೋಕೋಪಯೋಗಿ ಇಲಾಖೆಯು ಕ್ರಮ ತೆಗೆದುಕೊಂಡಿದ್ದು, ಸಮಿತಿಯು ಈ ಕ್ರಮವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ದೃಢೀಕರಿಸಿದ್ದು, ವೈದ್ಯಕೀಯ ಶಿಕ್ಷಣ ಇಲಾಖೆ, ಬಹುಮಹಡಿ ಕಟ್ಟಡದಲ್ಲಿ ಉಳಿಯುವುದೆಂದು ತೀರ್ಮಾನಿಸಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಕ್ರಮ ಸಂಖ್ಯೆ (1) ರಲ್ಲಿ ರಚಿಸಿರುವ ಸಮಿತಿಯನ್ನು ಪುನರ್ ರಚಿಸಲಾಗಿತ್ತು. ಮುಖ್ಯಮಂತ್ರಿಗಳು, ಸಚಿವರು ಮತ್ತು ಹಿರಿಯ ಅಧಿಕಾರಿಗಳು ಆಗಾಗ

ಕಾನೂನು ಇಲಾಖೆಯೊಂದಿಗೆ ಪ್ರಮುಖ ವಿಷಯಗಳ ಬಗ್ಗೆ ಸಮಾಲೋಚಿಸಬೇಕಾಗಿರುವುದರಿಂದ ಕಾನೂನು ಇಲಾಖೆಯನ್ನು ವಿಧಾನಸೌಧದಲ್ಲೇ ಉಳಿಸಿ ಅದರ ಬದಲು ಕೃಷಿ ಮತ್ತು ತೋಟಗಾರಿಕೆ ಇಲಾಖೆಯನ್ನು ಹೊಸ ವಿಕಾಸಸೌಧ ಕಟ್ಟಡಕ್ಕೆ ಸ್ಥಳಾಂತರಿಸಲು ಈ ಸಮಿತಿಯು ಶಿಫಾರಸ್ಸು ಮಾಡಿದೆ. ಆದುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 286 ಡಿಬಿಎಂ 2003, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್ 2004**

ಮೇಲೆ ನೀಡಿರುವ ವಿವರಗಳ ಹಿನ್ನೆಲೆಯಲ್ಲಿ ಹೊಸ ವಿಕಾಸಸೌಧ ಕಟ್ಟಡದಲ್ಲಿ ವೈದ್ಯಕೀಯ ಶಿಕ್ಷಣ ಸಚಿವರು ಮತ್ತು ವೈದ್ಯಕೀಯ ಶಿಕ್ಷಣ ಇಲಾಖೆಗೆ ಮೀಸಲಾಗಿಟ್ಟಿರುವ ಸ್ಥಳಾವಕಾಶವನ್ನು ಮಾನ್ಯ ಮುಖ್ಯ ಮಂತ್ರಿಗಳು ಮತ್ತು ಅವರ ಅಧಿಕಾರಿಗಳ ಉಪಯೋಗಕ್ಕಾಗಿ ಹಾಗೂ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಮತ್ತು ಕಾನೂನು ಇಲಾಖೆಗೆ ಮೀಸಲಾಗಿಟ್ಟಿರುವ ಸ್ಥಳಾವಕಾಶವನ್ನು ಕ್ರಮವಾಗಿ ಕೃಷಿ ಮತ್ತು ತೋಟಗಾರಿಕೆ ಸಚಿವರು ಮತ್ತು ಕೃಷಿ ಮತ್ತು ತೋಟಗಾರಿಕೆ ಇಲಾಖೆಗೆ ಹಂಚಿಕೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ರವಿಮೂರ್ತಿ**
ಪಿ.ಆರ್. 1401 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಶ್ರೀ ಎಂ.ಎಲ್. ಮಾದಯ್ಯ . ಅಂದಿನ ಕಾಇಂ, (ನಿವೃತ್ತ) ,ಜಿಪಂಇಂ ವಿಭಾಗ, ಬೆಂಗಳೂರು (ಗ್ರಾ) , ಶ್ರೀ ಎಲ್. ರಘು, ಅಂದಿನ ಸಕಾಇಂ ಮತ್ತು ಶ್ರೀ ಡಿ. ಈರಪ್ಪ, ಅಂದಿನ ಕಿ.ಇಂ. , ಜಿಪಂಇಂ ಉಪ ವಿಭಾಗ, ನೆಲಮಂಗಲ ಇವರ ಮೇಲೆ ಇಲಾಖಾ ವಿಚಾರಣೆ - ಆರೋಪಗಳಿಂದ ದೋಷಮುಕ್ತ ಗೊಳಿಸುವ ಬಗ್ಗೆ-ಆದೇಶ.

**ಓದಲಾಗಿದೆ:**
1. ಮುಇಂ, ಗ್ರಾಅಇಂಇ, ಬೆಂಗಳೂರು ಇವರ ಪತ್ರ ಸಂ. ಸಿಬ್ಬಂದಿ-7:ಕ.ಕಾಮಗಾರಿ:04-05 ದಿ. 7-4-04.
2. ಸರ್ಕಾರದಿಂದ ಜಾರಿಗೊಳಿಸಿದ ಕಾರಣ ಕೇಳುವ ನೋಟೀಸ್ ಸಂ. ಗ್ರಾಅಪ 24 ಇಖ್ಯೂ 04 ದಿ. 27-7-04 .
3. ಶ್ರೀ ಎಂ.ಎಲ್. ಮಾದಯ್ಯ . ಅಂದಿನ ಕಾಇಂ, ಇವರ ದಿ. 15-9-04ರ ಶ್ರೀ ಎಲ್. ರಘು, ಅಂದಿನ ಸಕಾಇಂ ಮತ್ತು ಶ್ರೀ ಡಿ. ಈರಪ್ಪ, ಅಂದಿನ ಕಿ.ಇಂ. , ಇವರ ದಿ. 14-10-04 ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂ.(1) ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಶ್ರೀ ಎಂ.ಎಲ್. ಮಾದಯ್ಯ. ಅಂದಿನ ಕಾಇಂ, (ನಿವೃತ್ತ) ಜಿಪಂಇಂ ವಿಭಾಗ, ಬೆಂಗಳೂರು (ಗ್ರಾ), ಶ್ರೀ ಎಲ್. ರಘು, ಅಂದಿನ ಸಕಾಇಂ ಮತ್ತು ಶ್ರೀ ಡಿ. ಈರಪ್ಪ, ಅಂದಿನ ಕಿ.ಇಂ., ಇವರುಗಳು ನೆಲಮಂಗಲ ಜಿಪಂಇಂ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು ಅಗಲಕುಪ್ಪೆ ಬಳಿ ಕುಮದ್ವತಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣದ ಕಾಮಗಾರಿಯನ್ನು ದಿ.4-8-97ರಲ್ಲಿ ಪ್ರಾರಂಭಿಸಿ ದಿ.19-7-99ರಲ್ಲಿ ಪೂರ್ಣಗೊಳಿಸಲು ಕಾಲ ನಿಗದಿಗೊಳಿಸಿದ್ದು, ಸದರಿ ಕಾಮಗಾರಿಗೆ ಸಂಬಂಧಿಸಿದಂತೆ, ಈ ಕಾಮಗಾರಿಯ ಅನುಷ್ಠಾನದಿಂದ ಅದನ್ನು ದಿ.22-5-99ರವರೆಗೆ ಸ್ಥಗಿತಗೊಳಿಸುವವರೆಗೂ ಯಾವುದೇ ಇಲಾಖಾ ನಿಯಮಗಳನ್ನು ಇವರು ಪಾಲಿಸಿರುವುದಿಲ್ಲವೆಂದು ಹಾಗೂ ಸಿಂಗಲ್ ಲೇನ್‌ನಿಂದ ಡಬಲ್ ಲೇನ್ ಗೆ ಹಾಗೂ 6 ಸ್ಪಾನ್ ಗಳಿಂದ 5 ಸ್ಪಾನ್ ಗಳಿಗೆ ಬದಲಾಯಿಸಿರುವ ಬಗ್ಗೆ ಮತ್ತು ಈ ಕಾಮಗಾರಿಯನ್ನು ಟೆಂಡರ್ ಆಧಾರದ ಮೇಲೆ ಕೈಗೊಂಡಿದ್ದು ಆಯಾ ಸಾಲುಗಳಲ್ಲಿ ಅನುದಾನ ಪಡೆಯಲು ಇವರು ವಿಫಲರಾಗಿರುವುದು ಮತ್ತು ಈ ಕಾಮಗಾರಿಯು ಜುಲೈ 99 ರೊಳಗೆ ಪೂರ್ಣಗೊಳ್ಳಬೇಕಾಗಿದ್ದು ಆ ಅವಧಿಯಲ್ಲಿ ಅನುದಾನವು ಲಭ್ಯವಿದ್ದರೂ ಕೂಡ ಕಾಮಗಾರಿಯನ್ನು ವೃಥಾ ನಿಲ್ಲಿಸಿ, ಮುಂದಿನ ಮೂರು ವರ್ಷಗಳವರೆಗೆ ಕಾಮಗಾರಿಯನ್ನು ಕೈಗೊಂಡಿಲ್ಲವೆಂಬ ಆರೋಪಕ್ಕೆ ಸಂಬಂಧಿಸಿದಂತೆ ಇವರುಗಳ ವಿರುದ್ಧ ನಿಯಮಾನುಸಾರ ಶಿಸ್ತು ಕ್ರಮ ಕೈಗೊಳ್ಳಲು ಕರಡು ದೋಷಾರೋಪಣಾ ಪಟ್ಟಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ , ಸದರಿ ಅಧಿಕಾರಿಗಳ ಮೇಲೆ ನಿಯಮಾನುಸಾರ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ. (2) ರಂತೆ ಶ್ರೀ ಎಂ.ಎಲ್. ಮಾದಯ್ಯ , ಅಂದಿನ ಕಾರ್ಯಪಾಲಕ ಇಂಜಿನಿಯರ್ ಇವರ ಮೇಲೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 214 ರಂತೆ ಮತ್ತು ಶ್ರೀ ರಘು , ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ ಶ್ರೀ ಡಿ. ಈರಪ್ಪ, ಅಂದಿನ ಸಹಾಯಕ ಇಂಜಿನಿಯರ್ ಇವರುಗಳ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 11 ರಂತೆ ಇಲಾಖಾ ವಿಚಾರಣೆ ಹೂಡಿ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿ ಆಪಾದನೆಗಳಿಗೆ ಸಂಬಂಧಿಸಿದಂತೆ ಅವರ ಲಿಖಿತ ಹೇಳಿಕೆಗಳನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದರಂತೆ ಸದರಿ ಅಧಿಕಾರಿಗಳು ಮೇಲೆ ಓದಲಾದ ಕ್ರಮ ಸಂಖ್ಯೆ. (3) ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿರುತ್ತಾರೆ.

ಶ್ರೀ ಎಂ.ಎಲ್. ಮಾದಯ್ಯ, ಅಂದಿನ ಕಾಇಂ (ನಿವೃತ್ತ) ಇವರು ತಮ್ಮ ಲಿಖಿತ ಹೇಳಿಕೆಯಲ್ಲಿ ತಾವು ಸದರಿ ಜಿಪಂಇಂವಿದಲ್ಲಿ ದಿ.30-5-96 ರಿಂದ 3-8-98ರವರೆಗೆ ಕಾರ್ಯನಿರ್ವಹಿಸಿದ್ದುದಾಗಿ ಹಾಗೂ ದಿ.30-6-01ರಂದು ಸೇವೆಯಿಂದ ನಿವೃತ್ತಿ ಹೊಂದಿರುವುದಾಗಿ, ತಮ್ಮ ಮೇಲೆ ಮಾಡಿರುವ ಆರೋಪಗಳು ಸುಮಾರು 7 ವರ್ಷಗಳ ಹಿಂದಿನದವುಗಳಾಗಿದ್ದು, ಸದರಿ ಘಟನೆ ನಡೆದು ಈಗಾಗಲೇ 4 ವರ್ಷಗಳಿಗಿಂತ ಮೇಲ್ಪಟ್ಟಿರುವುದರಿಂದ, ಸದರಿ ಆರೋಪಗಳ ಬಗ್ಗೆ ತಾವು ಸರ್ಕಾರಿ ಸೇವೆಯಲ್ಲಿದ್ದಾಗ ವಿಚಾರಣೆಗೆ ಗುರಿ ಮಾಡಿರುವುದಿಲ್ಲವೆಂದು ಈ ಆರೋಪಗಳು ತನಗೆ ಅನ್ವಯಿಸುವುದಿಲ್ಲವೆಂದು ತಮ್ಮ ಮೇಲಿನ ಆರೋಪಗಳನ್ನು ಕೈಬಿಡುವಂತೆ ಕೋರಿರುತ್ತಾರೆ.

ಶ್ರೀ ಎಲ್. ರಘು, ಅಂದಿನ ಸಕಾಇಂ ಮತ್ತು ಶ್ರೀ ಡಿ. ಈರಪ್ಪ, ಅಂದಿನ ಕಿ.ಇಂ. ಇವರುಗಳು ತಮ್ಮ ಲಿಖಿತ ಹೇಳಿಕೆಯಲ್ಲಿ ಈ ಸೇತುವೆಯನ್ನು 3.75 ಮೀಟರ್‌ಗೆ ನಿರ್ಮಿಸಲು ಉದ್ದೇಶಿಸಿದ್ದನ್ನು ಸಾರ್ವಜನಿಕರ ದೃಷ್ಟಿಯಿಂದ 7.50 ಮೀಟರ್‌ಗೆ ಹೆಚ್ಚಿಸಲು ಅಂದಿನ ವೈದ್ಯಕೀಯ ಶಿಕ್ಷಣ ಸಚಿವರ (ಸ್ಥಳೀಯ ಶಾಸಕರು) ಹಾಗೂ ಮೇಲಾಧಿಕಾರಿಗಳ ಸೂಚನೆ ಮೇರೆಗೆ ಕೈಗೊಳ್ಳಲಾಯಿತೆಂದು ಮತ್ತು ಕಾರ್ಯಪಾಲಕ ಇಂಜಿನಿಯರ್, ಜಿಪಂಇಂ ವಿಭಾಗ, ಬೆಂಗಳೂರು(ಗ್ರಾ), ಇವರು ಈ ಸೇತುವೆಯನ್ನು double lane ನಲ್ಲಿ ನಿರ್ಮಿಸಲು ದಿ:21-3-98ರ ತಮ್ಮ phonogram ನಲ್ಲಿ ಈ ಕಾಮಗಾರಿಯನ್ನು ತಕ್ಷಣ ಪ್ರಾರಂಭಿಸಲು ಸ್ಪಷ್ಟ ಸೂಚನೆಯನ್ನು ನೀಡಿದ್ದರಿಂದ ಅದರಂತೆ ಕಾಮಗಾರಿ ಪ್ರಾರಂಭಿಸಿ ಕಾಮಗಾರಿ ನಡೆಯುತ್ತಿತ್ತು. ಮುಖ್ಯ ಇಂಜಿನಿಯರ್, ಬೆಂಗಳೂರು(ಸಂಕದ) ಇವರು ದಿ:9-9-97 ರಂದು ಈ ಕಾಮಗಾರಿಯ ಸ್ಥಳ ಪರಿಶೀಲನೆಯ ಸಮಯದಲ್ಲಿ ನೀಡಿದ ಸೂಚನೆಗಳನ್ವಯ single lane ನ 5 piersಗೆ ಬದಲಾಗಿ double laneನ 4 piers ಗಳಿಗೆ ಬದಲಾವಣೆ ಮಾಡಿಕೊಂಡಿದ್ದರಿಂದ, 6 span ಗಳ ಬದಲು 5 span ಗಳಾಯಿತೆಂದು ಅದರಂತೆ ಪರಿಷ್ಕೃತ ಅಂದಾಜು, ನಕ್ಷೆ ಮತ್ತು designಗಳನ್ನು ಸಲ್ಲಿಸಲಾಯಿತೆಂದು ತಿಳಿಸಿರುತ್ತಾರೆ. ಇವುಗಳನ್ನು ಸಲ್ಲಿಸಿರುವ ಬಗ್ಗೆ ದಾಖಲಾತಿ ಒದಗಿಸಿರುತ್ತಾರೆ. ಉಪವಿಭಾಗದ ಮುಖ್ಯಸ್ಥರಾಗಿ, ಮೇಲಿನಂತೆ ತಾವು ಕ್ರಮ ಕೈಗೊಂಡಿದ್ದು, ತಮ್ಮ

ಮೇಲಾಧಿಕಾರಿಗಳು ನೀಡಿದ ಆದೇಶ ಮತ್ತು ಸೂಚನೆಗಳನ್ನು ಕಾಲಕಾಲಕ್ಕೆ ಗಮನಿಸಿ, ನಿಗದಿತ ಅವಧಿಯಲ್ಲಿ ಗುತ್ತಿಗೆದಾರರು ಕಾಮಗಾರಿಗಳನ್ನು ನಿರ್ವಹಿಸಲು ತಾವು ಕ್ರಮ ಕೈಗೊಂಡಿರುವುದಾಗಿ ತಿಳಿಸುತ್ತಾ, ಇದರಲ್ಲಿ ತಮ್ಮ ದುರ್ನಡತೆ ಏನೂ ಇಲ್ಲ, ಈ ಎಲ್ಲಾ ವಿಚಾರಗಳು ತಮ್ಮ ಮೇಲಾಧಿಕಾರಿಗಳಿಗೆ ತಿಳಿದೇ ಇತ್ತು ಎಂದು ತಿಳಿಸಿರುತ್ತಾರೆ. ಮತ್ತು ಈ ಅಂಶವನ್ನು ಸಮರ್ಥಿಸಲು ಸಂಬಂಧಪಟ್ಟ ದಾಖಲೆಗಳನ್ನು ನೀಡಿರುತ್ತಾರೆ.

ಇದಲ್ಲದೆ, ಕಾರ್ಯಪಾಲಕ ಇಂಜಿನಿಯರ್‌ರವರು ಪರಿಷ್ಕೃತ ಅಂದಾಜುಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ದಿ: 28-7-99 ರಂದು ಪ್ರಸ್ತಾವನೆಯನ್ನು ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಬೆಂಗಳೂರು ಜಿಲ್ಲಾಪಂಚಾಯತ್ ಇವರಿಗೆ ಸಲ್ಲಿಸಿರುವ ದಾಖಲಾತಿಯನ್ನು ಅನುಬಂಧ-5 ರಲ್ಲಿ ಒದಗಿಸಿದ್ದಾರೆ. ಕಾಮಗಾರಿ ನಡೆದಷ್ಟಕ್ಕೆ ಮಾತ್ರ ವಿಭಾಗೀಯ ಕಚೇರಿಗೆ ಬಿಲ್ಲು ಸಲ್ಲಿಸಿದ್ದು, ಕಾರ್ಯಪಾಲಕ ಇಂಜಿನಿಯರ್‌ರು ಕಾಮಗಾರಿಯನ್ನು ಪರಿಶೀಲಿಸಿ ಚೆಕ್ ಮೆಜರ್ ಮಾಡಿ ಹಣ ಪಾವತಿ ಮಾಡಿದ್ದಾರೆ. ಆದ್ದರಿಂದ, ಮೇಲಿನಂತೆ ಕಾಮಗಾರಿಯನ್ನು ಮೇಲಾಧಿಕಾರಿಗಳ ನಿರ್ದೇಶನಗಳು ಮತ್ತು ಸೂಚನೆಗಳನ್ವಯ ಕೈಗೊಂಡಿರುವುದರಿಂದ ಅದರಲ್ಲಿ ಯಾವುದೇ ಆರ್ಥಿಕ ನಷ್ಟವನ್ನು ತಾವು ಎಸಗಿರುವ ಪ್ರಶ್ನೆ ಉದ್ಭವಿಸುವುದಿಲ್ಲ ಎಂದಿದ್ದಾರೆ. ಒದಗಿಸಿರುವ ದಾಖಲೆಗಳ ಪ್ರಕಾರ ತಾವು ಮೇಲಾಧಿಕಾರಿಗಳ ಅನುಮೋದನೆಯೆಂತೆಯೇ ಕೆಲಸ ನಿರ್ವಹಿಸಿರುವುದಾಗಿ ಹಾಗೂ ಸಾಕಷ್ಟು ಅನುದಾನ ಲಭ್ಯವಿದ್ದಾಗ್ಯೂ ಸಹ ತಾವು ಕಾಮಗಾರಿಯನ್ನು 1999ರ ಜುಲೈನಿಂದ 3 ವರ್ಷಗಳ ಕಾಲ ಕಾಮಗಾರಿಯನ್ನು ಸ್ಥಗಿತ ಗೊಳಿಸಿದ್ದಾಗಿ ಮತ್ತು ಕಾಮಗಾರಿಯ ಗುಣನಿಯಂತ್ರಣ ತನಿಖಾ ವರದಿಯನ್ನು ಪಡೆಯದಿರುವ ಬಗ್ಗೆ ಮತ್ತು ಗುತ್ತಿಗೆದಾರರ ವಿರುದ್ಧ ಕ್ರಮ ಕೈಗೊಳ್ಳದಿರುವ ಬಗ್ಗೆ ಆಪಾದಿತ ಅಧಿಕಾರಿ ಉತ್ತರಿಸುತ್ತಾ, ತಾವು ನೆಲಮಂಗಲ ಜಿಪಂಇಂಉವಿದಲ್ಲಿ 1999ರ ಜೂನ್ ಮಧ್ಯ ಭಾಗದವರೆಗೆ ಕೆಲಸ ನಿರ್ವಹಿಸಿದ್ದು, ಅಲ್ಲಿಯವರೆಗೆ ಸೇತುವೆಯ ಕಾಮಗಾರಿ ತೃಪ್ತಿಕರವಾಗಿ ಮುನ್ನಡೆದಿತ್ತು, 1998-99ರ ಕ್ರಿಯಾ ಯೋಜನೆಯಲ್ಲಿ ಸೇರಿದ್ದ ಈ ಕಾಮಗಾರಿಗೆ ಕೇವಲ 2.625 ಲಕ್ಷ ರೂ.ಗಳ ಅನುದಾನ ಒದಗಿಸಲಾಗಿತ್ತು. ಅದರಲ್ಲಿ 1.645 ಲಕ್ಷ .ರೂ.ಗಳನ್ನು ಮಾತ್ರ ಒದಗಿಸಿಕೊಡಲಾಗಿತ್ತು. ಮಾರ್ಚ್ 98ರ ಅಂತ್ಯದವರೆಗೆ ಕಾಮಗಾರಿಗೆ 2.24 ಲಕ್ಷ.ರೂ.ಗಳು ಖರ್ಚಾಗಿದ್ದವು. ಪರಿಷ್ಕೃತ ಅಂದಾಜಿನಂತೆ 30 ಲಕ್ಷ ರೂ.ಗಳ ಈ ಕಾಮಗಾರಿಗೆ 20 ಲಕ್ಷ.ರೂ.ಗಳ ವಿಶೇಷ ಅನುದಾನ ಬಿಡುಗಡೆ ಮಾಡುವಂತೆ ಸ್ಥಳೀಯ ಶಾಸಕರು ಆದ ಅಂದಿನ ವೈದ್ಯಕೀಯ ಶಿಕ್ಷಣ ಸಚಿವರು ಅಂದಿನ ಹಣಕಾಸು ಸಚಿವರಿಗೆ ಬರೆದಿರುವ ಪತ್ರದ ಪ್ರತಿಯನ್ನು ನೀಡಿದ್ದಾರೆ. ಕಾಮಗಾರಿಯ ಗುಣ ನಿಯಂತ್ರಣದ ಬಗ್ಗೆ ಎತ್ತಿರುವ ಅಂಶಕ್ಕೆ ಸಂಬಂಧಿಸಿದಂತೆ ತಾವು ಕೆಲಸ ನಿರ್ವಹಿಸುತ್ತಿದ್ದ ಅವಧಿ ಜುಲೈ 1999ರವರೆಗೆ specification ನಂತೆ ಕಾಮಗಾರಿಯ ಗುಣಮಟ್ಟವನ್ನು ಕಾಪಾಡಲಾಗಿತ್ತೆಂದೂ ಮತ್ತು ಗುಣ ನಿಯಂತ್ರಣ ಪರೀಕ್ಷೆ ಮಾಡಿಸಿ ಫಲಿತಾಂಶವನ್ನು ಸಹ ಕಾಲಕಾಲಕ್ಕೆ ಪಡೆಯಲಾಗಿತ್ತೆಂದೂ ತಿಳಿಸುತ್ತಾ ಈ ಬಗ್ಗೆ ಕರ್ನಾಟಕ ಟೆಸ್ಟ್ ಹೌಸ್ ಪ್ರೈವೇಟ್ ಲಿಮಿಟೆಡ್ ನ 3 ಪರೀಕ್ಷಾ ವರದಿಗಳನ್ನು ಒದಗಿಸಿದ್ದಾರೆ. ತಮ್ಮ ಅವಧಿಯಲ್ಲಿ ಉಪ ವಿಭಾಗದಲ್ಲಿ ಕ್ರಿಯಾ ಯೋಜನೆಯ ಹಲವಾರು ಕಾಮಗಾರಿಗಳು ಪ್ರಗತಿಯಲ್ಲಿದ್ದುದರಿಂದ ತಾವು ಎಲ್ಲಾ ಕಾಮಗಾರಿಗಳನ್ನು ಈ ಕಾಮಗಾರಿಯೊಂದಿಗೆ ನೋಡಿ ಕೊಳ್ಳುವುದರೊಂದಿಗೆ ಗ್ರಾಮ ಸಭೆಗಳು ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ನ ಸಭೆಗಳಲ್ಲೂ ಸಹ ಭಾಗವಹಿಸುತ್ತಿದ್ದುದಾಗಿ ತಿಳಿಸಿರುತ್ತಾರೆ. ತಾವು ಈ ಕಾಮಗಾರಿ ಬಗ್ಗೆ ಗುತ್ತಿಗೆದಾರರಿಗೆ ಮತ್ತು ಈ ಕಾಮಗಾರಿಯನ್ನು ನೋಡುತ್ತಿದ್ದ ಸಂಬಂಧಪಟ್ಟ ಇಂಜಿನಿಯರ್‌ಗೆ ಅಗತ್ಯ ಸೂಚನೆ ಮತ್ತು ಸಲಹೆಗಳನ್ನು ನೀಡುತ್ತಿದ್ದುದಾಗಿಯೂ ಹಾಗೂ ಗುತ್ತಿಗೆದಾರರು ಗುತ್ತಿಗೆ ಕರಾರಿನ specification ನಂತೆ ಕಾಮಗಾರಿ ನಿರ್ವಹಿಸುತ್ತಿದ್ದುದಾಗಿಯು ಕಾಲಕಾಲಕ್ಕೆ ಮೇಲಾಧಿಕಾರಿಗಳು ಈ ಕಾಮಗಾರಿಯನ್ನು ತಪಾಸಣೆ ಮಾಡುತ್ತಿದ್ದುದರಿಂದ ತಾವು ಈ ಕಾಮಗಾರಿಯ ಗುಣಮಟ್ಟದ ಬಗ್ಗೆ ವರದಿ ಸಲ್ಲಿಸುವ ಪ್ರಮೇಯ ಒದಗಿ ಬರಲಿಲ್ಲವೆಂದು ಯಾವುದೇ ಹಂತದಲ್ಲಿ ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್‌ರಿಂದಾಗಲಿ ಅಥವಾ ಇನ್ನುಳಿದ ಮೇಲಾಧಿಕಾರಿಗಳಿಂದಾಗಲಿ ಕಾಮಗಾರಿ ಗುಣಮಟ್ಟದ ಬಗ್ಗೆಯಾಗಲಿ ಅಥವಾ ವಿಳಂಬದ ಬಗ್ಗೆಯಾಗಲಿ ಆಕ್ಷೇಪಣೆ ಬರಲಿಲ್ಲವೆಂದು ತಾವು ಜೂನ್ 1999 ರಲ್ಲಿ ಆ ಉಪ ವಿಭಾಗದಿಂದ ಬಿಡುಗಡೆಗೊಂಡ ನಂತರ ಈ ಕಾಮಗಾರಿಯ ಪ್ರಗತಿ ಬಗ್ಗೆ ತಮಗೆ ತಿಳಿದಿಲ್ಲವೆಂದೂ 3 ವರ್ಷಗಳಿಗೂ ಮೇಲ್ಪಟ್ಟು ಕಾಮಗಾರಿಯೊಂದು ಪೂರ್ಣಗೊಳ್ಳದೇ ಹಾಗೆಯೇ ಉಳಿದಲ್ಲಿ structure ಗಳು ಕ್ಷೀಣಿಸುವುದರೊಂದಿಗೆ ಗುಣಮಟ್ಟ ಮತ್ತು ಭದ್ರತೆ ಕ್ಷೀಣಿಸುವುದು ಸಾಮಾನ್ಯವೆಂದು ಹಾಗಾಗಿ ಜೂನ್ 1999ರಲ್ಲಿ ತಾವು ವರ್ಗಾವಣೆ ಯಾಗುವವರೆಗೆ ತಮ್ಮ ಮೇಲ್ವಿಚಾರಣೆಯಲ್ಲಿ ಯಾವುದೇ ಲೋಪವಾಗಿಲ್ಲವೆಂದು, ಆದ್ದರಿಂದ ಯಾವುದೇ ಅನಗತ್ಯ ವೆಚ್ಚ ಮಾಡುವ ಪ್ರಮೇಯ ಉದ್ಭವಿಸಿರಲಿಲ್ಲವೆಂದು ತಿಳಿಸಿರುತ್ತಾರೆ. ಈ ಕಾಮಗಾರಿಯನ್ನು ಬೆಂಗಳೂರಿನ ಗುತ್ತಿಗೆದಾರರಾದ ಶ್ರೀ.ವಿ.ನಾರಾಯಣ ರೆಡ್ಡಿ ಎಂಬುವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲಾಗಿತ್ತು ಕಾರ್ಯಪಾಲಕ ಇಂಜಿನಿಯರ್‌ರು ಈ ಗುತ್ತಿಗೆಗೆ ಪಾರ್ಟಿ ಇದ್ದು ಗುತ್ತಿಗೆ ಷರತ್ತುಗಳನ್ನು ಪಾಲಿಸುವುದು ಉಬಯತ್ರರ ಕರ್ತವ್ಯವಾಗಿರುತ್ತದೆ. ಹಾಗಾಗಿ ಗುತ್ತಿಗೆ ಷರತ್ತುಗಳ ಉಲ್ಲಂಘನೆಗೆ ಸರ್ಕಾರ ಗುತ್ತಿಗೆದಾರರ ಮೇಲೆ ಕ್ರಮ ಕೈಗೊಳ್ಳಲು ಸ್ವತಂತ್ರವಾಗಿದ್ದು, ಗುತ್ತಿಗೆ ಕರಾರಿನ 12ನೇ ಷರತ್ತಿನ ಪ್ರಕಾರ ಕಾಮಗಾರಿಯನ್ನು ನಿಗದಿತ specification, drawings ಮತ್ತು order ಗಳಂತೆ ಗುತ್ತಿಗೆದಾರರು ಮಾಡದಿದ್ದಲ್ಲಿ 16ನೇ ಷರತ್ತಿನ ಪ್ರಕಾರ ಅವರ ಮೇಲೆ ಕ್ರಮ ಕೈಗೊಳ್ಳಲು ಮತ್ತು ಕಳಪೆ ಕಾಮಗಾರಿಗೆ ದಂಡ ವಿಧಿಸಲು ಅಧಿಕಾರವಿದೆ ಎಂದು ಷರತ್ತಿನ ಪ್ರತಿಯನ್ನು ಸಹ ಒದಗಿಸಿದ್ದಾರೆ. ತಾವು ತಮ್ಮ ಕೆಲಸವನ್ನು ಸರಿಯಾಗಿ ನಿರ್ವಹಿಸಿದ್ದು, ತಾವು ಒದಗಿಸಿರುವ ದಾಖಲೆಗಳನ್ನು ಅವಗಾಹಿಸಿ ತಮ್ಮ ಮೇಲೆ ಮಾಡಲಾದ ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿದ್ದಾರೆ.

ಶ್ರೀ ಈರಪ್ಪ ಇವರು ತಾವು ಮೇಲಾಧಿಕಾರಿಗಳ ಆದೇಶದಂತೆ ಈ ಕಾಮಗಾರಿಗೆ ಸಂಬಂಧಪಟ್ಟ ಪರಿಷ್ಕೃತ ಅಂದಾಜುಪಟ್ಟಿ ಮತ್ತು ಕಾಮಗಾರಿಯ ಪ್ರಗತಿಯ ಅಳತೆ ಮತ್ತು ಬಿಲ್ಲುಗಳನ್ನು ಅಳತೆ ಪುಸ್ತಕ ಸಂ:1107 ಮತ್ತು 1121ರಲ್ಲಿ ದಾಖಲು ಮಾಡಿ ಸಲ್ಲಿಸಿದ್ದು, ಇದನ್ನು ಮೇಲಾಧಿಕಾರಿಗಳು ಅನುಮೋದಿಸಿದ ನಂತರ ಗುತ್ತಿಗೆದಾರರಿಗೆ ಹಣ ಪಾವತಿ ಮಾಡಲಾಗಿತ್ತು, ಈ ಕಾಮಗಾರಿಯನ್ನು ಮಂಜೂರಾದ ಅಂದಾಜುಪಟ್ಟಿಯ ಅಂಶಗಳ ಪ್ರಕಾರ ಹಾಗೂ ಅನುಮೋದಿತ ಟೆಂಡರ್ ಷೆಡ್ಯೂಲ್ ಬಿ-ಯಲ್ಲಿನ ವಿವರವಾದ ತಾಂತ್ರಿಕ ವಿವರಣೆಗಳೊಂದಿಗೆ ಮತ್ತು ಮಂಜೂರಾದ ಅಂದಾಜುಗಳ ಪ್ರಕಾರ ಪ್ರೊಪೊಶನ್ ಹಾಗೂ ನಿಬಂಧನೆಗಳಿಗೆ ಅನುಗುಣವಾಗಿ, ಮೇಲಾಧಿಕಾರಿಗಳ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನದಂತೆ ಕಾಮಗಾರಿಯನ್ನು ನಿರ್ವಹಿಸಲಾಗಿದೆ. ಈ ಕಾಮಗಾರಿಯ ಬಗ್ಗೆ ಮೇಲಾಧಿಕಾರಿಗಳು ಕಾಮಗಾರಿ ಪ್ರಗತಿ ಪರಿವೀಕ್ಷಣೆ ಸಮಯದಲ್ಲಿ ಕಾಮಗಾರಿಯ ಗುಣಮಟ್ಟದ ಬಗ್ಗೆಯಾಗಲಿ ಅಥವಾ ಕಳಪೆಯಾಗಿದೆಯೆಂದು ತಿಳಿಸಿರುವುದಿಲ್ಲ. ಈ ಬಗ್ಗೆ ಯಾವುದೇ ನೋಟಿಸ್ ಆಗಲಿ ತಿಳುವಳಿಕೆ ಪತ್ರವಾಗಲಿ ಇವರಿಗೆ ಕೊಟ್ಟಿರುವುದಿಲ್ಲ ಮತ್ತು ಈ ಕಾಮಗಾರಿ ನಡೆದು ಈಗಾಗಲೇ 5 ವರ್ಷಗಳು ಕಳೆದಿದ್ದು, ಅಪೂರ್ಣ ಸ್ಥಿತಿಯಲ್ಲಿರುವುದರಿಂದ, **ಈ ಕಾಮಗಾರಿಯನ್ನು ಕಳಪೆ ಕಾಮಗಾರಿಯೆಂದು** ಗುರುತಿಸಿರುತ್ತಾರೆ. ಮತ್ತು ಇವರು ಸದರಿ ಕಛೇರಿಯಲ್ಲಿ ಆಗಸ್ಟ್ 2000ರವರೆಗೆ ಕರ್ತವ್ಯ ನಿರ್ವಹಿಸಿದ್ದು, ನಂತರ ಈ ಕಾಮಗಾರಿಗೆ ಸಂಬಂಧಪಟ್ಟ ಅಳತೆ ಪುಸ್ತಕ ಪರಿಷ್ಕೃತ ಅಂದಾಜುಪಟ್ಟಿ ಇನ್ನಿತರ ದಾಖಲಾತಿಗಳನ್ನು ಮೇಲಾಧಿಕಾರಿಗಳ ಆದೇಶದಂತೆ ಶ್ರೀ ರಾಮಕೃಷ್ಣಪ್ಪ, ಕಿ ಇಂ ಇವರಿಗೆ ಹಸ್ತಾಂತರಿಸಿರುತ್ತೇನೆಂದು ಸದರಿ ಕಾಮಗಾರಿಗೆ ಸಂಬಂಧಪಟ್ಟ ದಾಖಲೆ ಪತ್ರಗಳ ಪ್ರತಿಗಳನ್ನು ಸಲ್ಲಿಸಿ , ತಮ್ಮ ಮೇಲೆ ಮಾಡಲಾದ ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿದ್ದಾರೆ.

ಸದರಿ ಲಿಖಿತ ಹೇಳಿಕೆ ಹಾಗೂ ದಾಖಲೆಗಳನ್ನು ಅವಗಾಹಿಸಲಾಗಿ , ಅಂದರೆ , ಕಾಮಗಾರಿಯನ್ನು Single lane ನಿಂದ Double Lane ಗೆ ಪರಿವರ್ತಿಸಲು ಆಪಾದಿತ ಅಧಿಕಾರಿಗಳು ಸಕಾಲದಲ್ಲಿ ತಾವು ಕೈಗೊಳ್ಳಬೇಕಾದ ಕ್ರಮಗಳನ್ನು ಕೈಗೊಂಡಿದ್ದು, ಅನುಮೋದನೆ ದೊರೆಯದಿರುವುದರಿಂದ ವಿಳಂಬವಾಗಿರುತ್ತದೆಂದು ಕಂಡು ಬರುತ್ತದೆ. ಈಗಾಗಲೇ ನಡೆದಿರುವ ಈ ಕಾಮಗಾರಿಯ ಗುಣಮಟ್ಟದ ಬಗ್ಗೆ ಆಪಾದಿತ

ಅಧಿಕಾರಿಗಳು ದಿ. 19-4-98 ರಂದೇ ಕರ್ನಾಟಕ ಟೆಸ್ಟ್ ಹೌಸ್ ಪ್ರೈವೇಟ್ ಲಿಮಿಟೆಡ್ , ಬೆಂಗಳೂರು ಇವರಿಂದ ಕಾಮಗಾರಿಯ ಗುಣಮಟ್ಟ ಪರೀಕ್ಷೆ ಮಾಡಿಸಿದ್ದು, ಅವರು ಸಲ್ಲಿಸಿದ ವರದಿಗಳ ಪ್ರಕಾರ ಕಾಮಗಾರಿಯ ಗುಣಮಟ್ಟದಲ್ಲಿ ಯಾವುದೇ ಲೋಪ ಕಂಡುಬರುವುದಿಲ್ಲ. ಗುಣಮಟ್ಟ ಪರೀಕ್ಷೆಯಲ್ಲಿ ಆ ಹಂತದಲ್ಲಿ ಯಾವುದೇ ಲೋಪ ಕಂಡು ಬರದೇ ಇದ್ದುದರಿಂದ ಹಾಗೂ ಕಳಪೆ ಆದಂತಹ ಸಂದರ್ಭದಲ್ಲಿ ಗುತ್ತಿಗೆದಾರರ ವಿರುದ್ಧ ಕ್ರಮ ಜರುಗಿಸಲು ಅವಕಾಶ ಇದ್ದೇ ಇರುವ ಹಿನ್ನೆಲೆಯಲ್ಲಿ ಇವರ ಮೇಲೆ ಮಾಡಿರುವ ಆರೋಪಗಳು ಸರಿಯಾದುದಲ್ಲವೆಂದು ಸರ್ಕಾರ ನಿರ್ಣಯಿಸಿ, ಅವರ ವಿವರಣೆಯನ್ನು ಒಪ್ಪಿ ಶಿಸ್ತು ಕ್ರಮ ಕೈಬಿಡಲು ನಿರ್ಧರಿಸಿ , ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 24 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಎಲ್. ಮಾದಯ್ಯ . ಅಂದಿನ ಕಾಇಂ, (ನಿವೃತ್ತ) ,ಜಿಪಂಇಂ ವಿಭಾಗ, ಬೆಂಗಳೂರು (ಗ್ರಾ) , ಇವರ ಮೇಲೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 214 ರಲ್ಲಿನ 4 ವರ್ಷಗಳ ಕಾಲ ಮಿತಿಯಿಂದಾಗಿ ಇಲಾಖಾ ವಿಚಾರಣೆ ನಡೆಸಲು ಸಾಧ್ಯವಿಲ್ಲದಿರುವುದರಿಂದ ಹಾಗೂ ಶ್ರೀ ಎಲ್. ರಘು, ಅಂದಿನ ಸಕಾಇಂ ಮತ್ತು ಶ್ರೀ ಡಿ. ಈರಪ್ಪ, ಅಂದಿನ ಕಿ.ಇಂ., ಇವರುಗಳು ಅಂದು ಜಿಪಂಇಂ ಉಪ ವಿಭಾಗ, ನೆಲಮಂಗಲದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು ಅಗಲಕುಪ್ಪೆ ಬಳಿ ಕುಮದ್ವತಿ ನದಿಗೆ ಅಡ್ಡಲಾಗಿ ನಿರ್ಮಿಸಿದ್ದ ಸೇತುವೆ ನಿರ್ಮಾಣದ ಕಾಮಗಾರಿಗಳಿಗೆ ಸಂಬಂಧಿಸಿದೆ. ದಿ. 4-8-97ರಲ್ಲಿ ಪ್ರಾರಂಭಿಸಿ ದಿ.19-7-99ರಲ್ಲಿ ಪೂರ್ಣಗೊಳಿಸಲು ಕಾಲ ನಿಗದಿಗೊಳಿಸಿದ್ದರೂ ಸಹ ಅದನ್ನು ದಿ.22-5-99 ರವರೆಗೆ ಸ್ಥಗಿತಗೊಳಿಸಿ ಮತ್ತು ಯಾವುದೇ ಇಲಾಖಾ ನಿಯಮಗಳನ್ನು ಇವರು ಪಾಲಿಸಿರುವುದಿಲ್ಲವೆಂದು ಹಾಗೂ ಸಿಂಗಲ್ ಲೇನ್‌ನಿಂದ ಡಬಲ್ ಲೇನ್ ಗೆ ಹಾಗೂ 6 ಸ್ಪಾನ್ ಗಳಿಂದ 5 ಸ್ಪಾನ್ ಗಳಿಗೆ ಬದಲಾಯಿಸಿರುವ ಬಗ್ಗೆ ಮತ್ತು ಈ ಕಾಮಗಾರಿಯನ್ನು ಟೆಂಡರ್ ಆಧಾರದ ಮೇಲೆ ಕೈಗೊಂಡಿದ್ದರೂ ಸಹ ಆಯಾ ಸಾಲುಗಳಲ್ಲಿ ಅನುದಾನ ಪಡೆಯಲು ಇವರು ವಿಫಲರಾಗಿದ್ದಾರೆಂಬ ಅವರ ಮೇಲೆ ಮಾಡಲಾಗಿದ್ದ ಆಪಾದನೆಗಳಿಗೆ ಸಂಬಂಧಿಸಿದಂತೆ ಅವರುಗಳು ನೀಡಿರುವ ಲಿಖಿತ ಹೇಳಿಕೆಗಳ ಪ್ರಕಾರ ಆರೋಪಗಳು ರುಜುವಾತಾಗದಿರುವುದರಿಂದ ಅವರನ್ನು ಅವರ ಮೇಲಿನ ಆರೋಪಗಳಿಂದ ದೋಷಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಹೊನ್ನಪ್ಪ ನಾಯಕ್**

ಪಿ.ಆರ್. 1406 ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ), ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಶಾಖೆಯಲ್ಲಿನ ಎರಡು ಗ್ರೂಪ್-ಬಿ ಹುದ್ದೆಗಳನ್ನು ಗ್ರೂಪ್-ಎ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಸಚಿವರ ಟಿಪ್ಪಣಿ ಸಂಖ್ಯೆ: ಲೋಇ/ಇಂ/2518/2004, ದಿನಾಂಕ: 4.8.2004.

2. ಸಚಿವರ ಟಿಪ್ಪಣಿ ಸಂಖ್ಯೆ: ಲೋಇ/ಇಂ/3221/2004, ದಿನಾಂಕ: 16.8.2004.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 257 ಸಅಸೇ 2004, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2004**

ಕ್ರಮ ಸಂಖ್ಯೆ: 1 ಮತ್ತು 2 ರಲ್ಲಿ ಓದಲಾಗಿರುವ ಟಿಪ್ಪಣಿಗಳಲ್ಲಿ ಮಾನ್ಯ ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಶಾಖೆಗೆ ಡಾ: ಆರ್. ನರಸಿಂಹಮೂರ್ತಿ ಕನ್ನಡ ಆಯ್ಕೆ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಮತ್ತು ಕೆ.ಆರ್. ಶಿವಕುಮಾರ್, ಸಹಾಯಕ ಕಾರ್ಯಪಾಲರ ಅಭಿಯಂತರರು, ಕಾವೇರಿ ಕೋಶ (WRDO) ನೀರಾವರಿ ಇಲಾಖೆ, ನವದೆಹಲಿ, ಇವರುಗಳನ್ನು ನೇಮಿಸುವಂತೆ ಕೋರಲಾಗಿದೆ. ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಶಾಖೆಯಲ್ಲಿ ಡಾ: ಆರ್ ನರಸಿಂಹಮೂರ್ತಿ ಮತ್ತು ಶ್ರೀ ಕೆ.ಆರ್. ಶಿವಕುಮಾರ್ ಅವರನ್ನು ನೇಮಿಸಲು ಗ್ರೂಪ್-ಎ ಹುದ್ದೆ ಖಾಲಿ ಇಲ್ಲದಿರುವುದರಿಂದ ಈ ತಕ್ಷಣ ಜಾರಿಗೆ ಬರುವಂತೆ ಲೋಕೋಪಯೋಗಿ ಮತ್ತು ಇಂಧನ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಚಿವರ ಆಪ್ತ ಶಾಖೆಯಲ್ಲಿ ಮಂಜೂರಾಗಿ ಖಾಲಿಯಿರುವ ಎರಡು ಗ್ರೂಪ್-ಬಿ ಹುದ್ದೆಗಳನ್ನು ಗ್ರೂಪ್-ಎ ಹುದ್ದೆಗಳಿಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1930 ವೆಚ್ಚ-5:2004 ದಿನಾಂಕ: 23.11.2004 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1407 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಕ್ಯಾಪ್ಟನ್ ಆರ್. ಮೋಹನ್, ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಕಾರವಾರ ಅವರಿಗೆ ದೆಹಲಿಗೆ ಹೋಗುವ ಸಂಬಂಧ ಅನುಮತಿ ನೀಡುವ ಕುರಿತು.

**ಓದಲಾಗಿದೆ:** 1. ಭಾರತೀಯ ಒಳನಾಡು ಜಲಮಾರ್ಗ ಪ್ರಾಧಿಕಾರ ರವರ ಪತ್ರ ಸಂಖ್ಯೆ: IWAI/CSS/PROGRESS/2004, ದಿನಾಂಕ: 20.9.2004.

2. ನಿರ್ದೇಶಕರು, ಬಂ ಮತ್ತು ಒ.ಜ.ಸಾ. ಇಲಾಖೆ ಕಾರವಾರ ಇವರ ಪತ್ರ ಸಂಖ್ಯೆ: ಬಂಒಜಸಾ 40/ಜಿಎನ್‌ಎಲ್ 1/ 2002, ದಿನಾಂಕ: 5.10.2004.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ನೆರವಿನಿಂದ ರಾಜ್ಯದಲ್ಲಿ ಒಳನಾಡು ಜಲಸಾರಿಗೆ ಅಭಿವೃದ್ಧಿಪಡಿಸುವ ವಿಷಯಕ್ಕೆ ಸಂಬಂಧಪಟ್ಟಂತೆ, ದಿನಾಂಕ: 8.10.2004 ರಂದು ನವ ದೆಹಲಿಯಲ್ಲಿ ನಡೆಯಲಿರುವುದಾಗಿ ಹಾಗೂ ಸದರಿ ಸಭೆಯಲ್ಲಿ ಭಾಗವಹಿಸಲು ರಾಜ್ಯ ಸರ್ಕಾರದ ಪ್ರತಿ ನಿಧಿಗಳನ್ನು ನಿಯೋಜಿಸುವಂತೆ ಮೇಲೆ (1) ರಲ್ಲಿ ಓದಲಾದ ಪತ್ರದ ಮೂಲಕ ಭಾರತೀಯ ಒಳನಾಡು ಜಲಸಾರಿಗೆ ಪ್ರಾಧಿಕಾರವು ಕೋರಿರುತ್ತದೆ. ಈಗಾಗಲೇ ರಾಜ್ಯದ ಏಳು ಜಲ ಮಾರ್ಗಗಳು ಅಭಿವೃದ್ಧಿಗೋಸ್ಕರ ಯೋಜನಾ ವರದಿಗಳು ಕೇಂದ್ರ ಸರ್ಕಾರದ ಮಂಜೂರಾತಿಗಾಗಿ ಒಪ್ಪಿಸಿದ್ದರಿಂದ ಒಳನಾಡು ಜಲಸಾರಿಗೆ ವಿಭಾಗದ ಅಭಿವೃದ್ಧಿ ಬಾಬ್ತು ದಿನಾಂಕ: 18.10.2004 ರಂದು ನವ ದೆಹಲಿಯಲ್ಲಿ ನಡೆಯಲಿರುವ ಸಭೆಗೆ ಕ್ಯಾಪ್ಟನ್ ಆರ್. ಮೋಹನ್, ನಿರ್ದೇಶಕರು, ಬಂದರು

ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕಾರವಾರ ಇವರು ಹಾಜರಾಗಬೇಕಾಗಿದ್ದು ದಿನಾಂಕ: 8.10.2004 ರಂದು ನವದೆಹಲಿಗೆ ಪ್ರಯಾಣ ಬೆಳೆಸಬೇಕಾಗಿರುವುದರಿಂದ ರಾಜ್ಯ ಬಿಟ್ಟು ದೆಹಲಿಗೆ ಹೋಗಿ ಬರಲು ಘಟನೋತ್ತರ ಅನುಮತಿ ನೀಡಬೇಕಾಗಿ ಮೇಲೆ (2) ರಲ್ಲಿ ಓದಲಾದ ಪತ್ರದ ಮೂಲಕ ನಿರ್ದೇಶಕರು ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 248 ಪಿಎಸ್‌ಪಿ 2004, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2004**

ದಿನಾಂಕ: 8.10.2004 ರಂದು ಒಳನಾಡು ಜಲಸಾರಿಗೆ ಅಭಿವೃದ್ಧಿ ಬಗ್ಗೆ ನವದೆಹಲಿಯಲ್ಲಿ ನಡೆದ ಸಭೆಯಲ್ಲಿ ಭಾಗವಹಿಸಲು ನವದೆಹಲಿಗೆ ಹೋಗಿ ಬರಲು ಕ್ಯಾಪ್ಟನ್ ಆರ್. ಮೋಹನ್, ನಿರ್ದೇಶಕರು ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಕಾರವಾರ ಇವರಿಗೆ ಘಟನೋತ್ತರ ಅನುಮತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96 ರಂತೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಎಸ್. ವಿಶ್ವನಾಥ್**

ಪಿ.ಆರ್. 1409 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಬಂದರುಗಳು).

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 30(1)ನ್ನು ವೀರಶೈವ ಸಹಕಾರ ಬ್ಯಾಂಕ್ ನಿ., ಬೆಂಗಳೂರು, ಇದಕ್ಕೆ ಸಂಬಂಧಿಸಿದಂತೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ.2.ಎಸ್‌ಎಸ್‌ಎನ್.276:99-2000, ದಿನಾಂಕ: 18.10.2004.

**ಪ್ರಸ್ತಾವನೆ:**

ವೀರಶೈವ ಸಹಕಾರ ಬ್ಯಾಂಕ್ ನಿ, ಬೆಂಗಳೂರು, ಇದರ ಆಡಳಿತಗಾರರ ಅವಧಿಯನ್ನು ದಿನಾಂಕ: 25.08.2004 ರಿಂದ 31.01.2005ರ ವರೆಗೆ ವಿಸ್ತರಿಸಲು ಅನುಕೂಲವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 121 ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 30(1)ಕ್ಕೆ ಸೂಕ್ತ ತಿದ್ದುಪಡಿ ಮಾಡಬೇಕೆಂದು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಮೇಲ್ಕಂಡ ವೀರಶೈವ ಸಹಕಾರ ಬ್ಯಾಂಕ್ ಆಡಳಿತಗಾರರ ಅವಧಿಯನ್ನು ವಿಸ್ತರಿಸಲು ಅನುವಾಗುವಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 165 ಸಿಎಲ್‌ಎಂ 2004, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2004**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 30ರ ಪ್ರಕರಣವು ಈ ಕೆಳಕಂಡ ಮಾರ್ಪಾಟುಗಳೊಂದಿಗೆ ವೀರಶೈವ ಸಹಕಾರ ಬ್ಯಾಂಕ್ ನಿ, ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ.-

**30ರ ಪ್ರಕರಣದಲ್ಲಿ:**

(1)ನೇ ಉಪ ಪ್ರಕರಣದಲ್ಲಿರುವ **"ಒಂದು ವರ್ಷ"** ಎಂಬ ಪದಕ್ಕೆ ಬದಲಾಗಿ **"ಹದಿನೆಂಟು ತಿಂಗಳು"** ಎಂಬುದಾಗಿ ಸೇರಿಸತಕ್ಕದ್ದು.

**ಸೂಚನೆ:** ಪ್ರಕರಣ 30(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 24.02.2005ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ, ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 30(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1410 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಜಮೀಲ್ ಅಹ್ಮದ್, ಹಿಂದಿನ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಇವರ ಮೇಲಿನ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶಗಳು.

**ಓದಲಾಗಿದೆ:**
1) ದಿನಾಂಕ: 8.2.2000ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 12 ಡಿಜಿಡಿ 2000.
2) ದಿನಾಂಕ: 10.7.2000ರ ಆದೇಶ ಸಂಖ್ಯೆ: ಇಡಿ 12 ಡಿಜಿಡಿ 2000.
3) ದಿನಾಂಕ: 8.9.2000ರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಡಿ 12 ಡಿಜಿಡಿ 2000
4) ದಿನಾಂಕ: 13.12.2000ರ ಪತ್ರ ಸಂಖ್ಯೆ: ಇಡಿ 12 ಡಿಜಿಡಿ 2000.
5) ದಿನಾಂಕ: 1.1.2001ರ ಲೋಕಾಯುಕ್ತ ನಿಬಂಧಕರ ಪತ್ರ ಸಂಖ್ಯೆ: ಎಲ್‌ಒಕೆ:ಎಲ್‌ಸಿ:ಡಿಇ 11:2000-01
6) ದಿನಾಂಕ: 16.1.2001ರ ಆದೇಶ ಸಂಖ್ಯೆ: ಇಡಿ 12 ಡಿಜಿಡಿ 2000
7) ದಿನಾಂಕ: 5.10.2001ರ ಆದೇಶ ಸಂಖ್ಯೆ: ಇಡಿ 12 ಡಿಜಿಡಿ 2000
8) ದಿನಾಂಕ: 31.7.2003ರ ವಿಚಾರಣಾ ವರದಿ ಸಂಖ್ಯೆ: ಎಲ್‌ಒಕೆ:ಎಆರ್‌ಇ 4:ಇಎನ್‌ಕ್ಯೂ 3:2001-02.

**ಪ್ರಸ್ತಾವನೆ:**

ಶ್ರೀ ಜಮೀಲ್ ಅಹ್ಮದ್, ನಿವೃತ್ತ ಉಪನಿರ್ದೇಶಕರು ಇವರು ಹಿಂದೆ ಶಿವಮೊಗ್ಗ ಜಿಲ್ಲೆಯ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕಪ್ಪು ಹಲಗೆ ಯೋಜನೆಯಡಿ ಗ್ಲೋಬ್ ಖರೀದಿಯಲ್ಲಿ ಅವ್ಯವಹಾರ, ಶಿಕ್ಷಕರ ವರ್ಗಾವಣೆಯಲ್ಲಿ ಹಾಗೂ ನೇಮಕಾತಿಯಲ್ಲಿ ನಿಯಮಗಳನ್ನು ಉಲ್ಲಂಘಿಸಿ

ಅವ್ಯವಹಾರ ಎಸಗಿದ ಇತ್ಯಾದಿ ಆರೋಪಗಳ ಹಿನ್ನೆಲೆಯಲ್ಲಿ ಅವರನ್ನು ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ: 8.2.2000ದ ಆದೇಶದಲ್ಲಿ ಶಿಸ್ತುಕ್ರಮ ಬಾಕಿ ಇರಿಸಿ ಅಮಾನತ್ತಿನಲ್ಲಿರಿಸಲಾಗಿತ್ತು. ನಂತರ ದಿನಾಂಕ: 10.7.2000ರ ಆದೇಶದಲ್ಲಿ ಶಿಸ್ತುಕ್ರಮ ಬಾಕಿ ಇರಿಸಿ ಸೇವೆಗೆ ಪುನರ್ ಸ್ಥಾಪಿಸಲಾಗಿತ್ತು. ಇವರ ಮೇಲಿನ ಆರೋಪಗಳ ಬಗ್ಗೆ ಶಿಸ್ತುಕ್ರಮ ಜರುಗಿಸಲು ನಿರ್ಧರಿಸಿ ಮೇಲೆ ಓದಲಾದ ಕ್ರ.ಸಂ.(3) ರಲ್ಲಿನ ದಿನಾಂಕ: 8.9.2000ರ ಕಾರಣ ಕೇಳುವ ನೋಟೀಸ್ ಮೂಲಕ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ರಡಿ ಆರೋಪಣಾ ಪಟ್ಟಿಯನ್ನು ಜಾರಿಮಾಡಿ ಅವರ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ನಿಗದಿತ ಅವಧಿಯೊಳಗೆ ಆಪಾದಿತರು ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸದಿರುವ ಕಾರಣ, ಅವರ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ ಆಪಾದನೆಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಇಲಾಖಾ ವಿಚಾರಣೆ ನಡೆಸುವುದು ಉಚಿತವೆಂದು ಪರಿಗಣಿಸಿ ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸಲು ನಿರ್ಧರಿಸಿ ಮೇಲೆ ಓದಲಾದ ಕ್ರ.ಸಂ.(4)ರ ದಿನಾಂಕ: 13.12.2000ರ ಪತ್ರದಲ್ಲಿ ವಿಚಾರಣಾಧಿಕಾರಿಗಳ ಮತ್ತು ಮಂಡನಾಧಿಕಾರಿಗಳ ಹೆಸರನ್ನು ಸೂಚಿಸುವಂತೆ ಕರ್ನಾಟಕ ಲೋಕಾಯುಕ್ತ ನಿಬಂಧಕರನ್ನು ಕೋರಲಾಗಿತ್ತು. ಮೇಲೆ ಓದಲಾದ ಕ್ರ.ಸಂ.(5)ರ ದಿನಾಂಕ: 1.1.2001ರ ಪತ್ರದಲ್ಲಿ ವಿಚಾರಣಾಧಿಕಾರಿಗಳ ಮತ್ತು ಮಂಡನಾಧಿಕಾರಿಗಳ ಪ್ರಸ್ತಾವನೆಯನ್ನು ಲೋಕಾಯುಕ್ತ ನಿಬಂಧಕರು ಸಲ್ಲಿಸಿರುವ ಮೇರೆಗೆ ದಿನಾಂಕ: 16.1.2001ರ ಆದೇಶದಲ್ಲಿ ಹೆಚ್ಚುವರಿ ನಿಬಂಧಕರು (ವಿಚಾರಣೆಗಳು-1) ಕರ್ನಾಟಕ ಲೋಕಾಯುಕ್ತ ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅವರಿಗೆ ಹೊಂದಿಕೊಂಡಿರುವ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ನಂತರ ವಿಚಾರಣಾಧಿಕಾರಿಯಾಗಿ ನೇಮಕಗೊಂಡಿರುವ ಹೆಚ್ಚುವರಿ ನಿಬಂಧಕರು (ವಿಚಾರಣೆಗಳು-1) ಇವರು ವರ್ಗಾವಣೆಗೊಂಡ ಕಾರಣ ಅವರ ಬದಲಿಗೆ ಹೆಚ್ಚುವರಿ ನಿಬಂಧಕರು (ವಿಚಾರಣೆಗಳು-4) ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಅವರಿಗೆ ಹೊಂದಿಕೊಂಡಿರುವ ಅಧಿಕಾರಿಯನ್ನು ಮಂಡನಾಧಿಕಾರಿಯಾಗಿ ದಿನಾಂಕ: 5.10.2001ರ ಆದೇಶದಲ್ಲಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ನಿಯಮಗಳ ಪ್ರಕಾರ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (8)ರ ದಿನಾಂಕ: 31.7.2003ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ಶ್ರೀ ಜಮೀಲ್ ಅಹ್ಮದ್ ಅವರ ಮೇಲೆ ಮಾಡಲಾದ ಎಲ್ಲಾ 9 ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದಾರೆ.

ವಿಚಾರಣಾ ವರದಿಯನ್ನು ಸಂಬಂಧಪಟ್ಟ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಜಮೀಲ್ ಅಹ್ಮದ್ ಅವರನ್ನು ದೋಷಮುಕ್ತರನ್ನಾಗಿ ಮಾಡಲು ನಿರ್ಧರಿಸಿ ಸರ್ಕಾರ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 12 ಡಿಜಿಡಿ 2000, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಜಮೀಲ್ ಅಹ್ಮದ್, ನಿವೃತ್ತ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಮೇಲಿನ ಆರೋಪಗಳಿಂದ ದೋಷಮುಕ್ತರನ್ನಾಗಿ ಆದೇಶಿಸಿದೆ. ಇವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕ.ನಾ.ಸೇ. ನಿಯಮ 1957ರ ನಿಯಮ 103(ಎ) ರನ್ವಯ "ಕರ್ತವ್ಯದ ಮೇಲಿದ್ದಂತೆ" ಎಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 1412 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಭಾರತ ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ನೀಡಲಾದ ಪ್ರಕರಣಗಳಲ್ಲಿ ಉಪಯೋಗಿ ಸಂಸ್ಥೆಯವರಿಂದ ಪ್ರಸಕ್ತ ನಿವ್ವಳ ಮೌಲ್ಯ (Net Present Value) ಸಂಗ್ರಹಣೆ ಮಾಡಿರುವುದನ್ನು CAMPA ಲೆಕ್ಕ ಶೀರ್ಷಿಕೆಯಲ್ಲಿ ಜಮಾ ಮಾಡುವ ಬಗ್ಗೆ.

**ಓದಲಾಗಿದೆ:**
1. ಭಾರತ ಸರ್ವೋಚ್ಚ ನ್ಯಾಯಾಲಯದ ಆದೇಶ ದಿನಾಂಕ: 30.12.2002.
2. ಸರ್ಕಾರಿ ಅಧಿಸೂಚನೆ ಸಂಖ್ಯೆ: FEE 247 FGL 2002, ದಿನಾಂಕ: 17.1.2004.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರು ಪತ್ರ ಸಂಖ್ಯೆ: ಎ5 (1) ಎಂಎನ್‌ಓ...ಸಿಆರ್-05/ 2003-04, ದಿನಾಂಕ: 15.06.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 30.12.2002ರ ಆದೇಶದಲ್ಲಿ ಭಾರತ ಸರ್ವೋಚ್ಚ ನ್ಯಾಯಾಲಯವು ಎಲ್ಲಾ ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ನೀಡಲಾಗಿರುವ ಪ್ರಕರಣಗಳಲ್ಲಿ ಉಪಯೋಗಿ ಸಂಸ್ಥೆಗಳಿಂದ ಪ್ರತಿ ಹೆಕ್ಟೇರಿಗೆ ಅರಣ್ಯ ಭೂಮಿಯ ಲಕ್ಷಣವನ್ನು ಗಮನದಲ್ಲಿರಿಸಿ ರೂ.5.8 ಲಕ್ಷಗಳಿಂದ ರೂ.9.2 ಲಕ್ಷಗಳವರೆಗೆ ಪ್ರಸಕ್ತ ನಿವ್ವಳ ಮೌಲ್ಯವನ್ನು (NPV) ಸಂಗ್ರಹಣೆ ಮಾಡುವಂತೆ ಆದೇಶಿಸಿದೆ.

2. ಭಾರತ ಸರ್ವೋಚ್ಚ ನ್ಯಾಯಾಲಯದ ಆದೇಶದನ್ವಯ ಕೇಂದ್ರ ಸರ್ಕಾರವು ದಿನಾಂಕ: 30.10.2002ರ ನಂತರ ಅರಣ್ಯೇತರ ಉದ್ದೇಶಗಳಿಗೆ ಅರಣ್ಯ ಭೂಮಿಯನ್ನು ವರ್ಗಾಯಿಸಲು ಅನುಮೋದನೆ ನೀಡಿರುವ ಪ್ರಕರಣಗಳಲ್ಲಿ ಕೇಂದ್ರ ಸರ್ಕಾರದಿಂದ ಅಂತಿಮ ಅನುಮೋದನೆ ನೀಡುವುದಕ್ಕೆ ಮೊದಲು ಉಪಯೋಗಿ ಸಂಸ್ಥೆಯಿಂದ NPV ಸಂಗ್ರಹಣೆ ಮಾಡುವ ಬಗ್ಗೆ ರಾಜ್ಯ ಸರ್ಕಾರವು ಮೇಲೆ (2) ರಲ್ಲಿ ಓದಲಾದ ದಿನಾಂಕ: 17.01.2004ರ ಸರ್ಕಾರಿ ಅಧಿಸೂಚನೆ ಸಂಖ್ಯೆ: FEE 247 FGL 2002 ರಲ್ಲಿ ವಿವಿಧ ಅರಣ್ಯ ಪ್ರದೇಶಗಳ NPV ಯನ್ನು ನಿಗದಿಪಡಿಸಿದೆ.

3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ದಿನಾಂಕ: 17.1.2004ರ ಸರ್ಕಾರಿ ಅಧಿಸೂಚನೆಯಂತೆ ಸಂಗ್ರಹಿಸಲಾದ NPV ಯನ್ನು CAMPA ಯಲ್ಲಿ ಠೇವಣಿ ಮಾಡಲು ಲೆಕ್ಕ ಶೀರ್ಷಿಕೆಯನ್ನು ತಿಳಿಸುವವರೆಗೆ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ನಿಶ್ಚಿತ ಠೇವಣಿ ಖಾತೆ ತೆರೆಯಲು ಅನುಮತಿ ನೀಡುವಂತೆ ಓದಲಾದ (3) ರಲ್ಲಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 93 ಎಫ್‌ಎಫ್‌ಎಂ 2004, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2004**

ದಿನಾಂಕ: 17.1.2004ರ ಅಧಿಸೂಚನೆಯನ್ವಯ ಸಂಗ್ರಹಿಸಲಾದ ಪ್ರಸ್ತುತ ನಿವ್ವಳ ಮೌಲ್ಯ (NPV) ವನ್ನು ಬಡ್ಡಿ ತರುವ ಖಜಾನೆ ಲೆಕ್ಕಶೀರ್ಷಿಕೆ "8342-00-103-2-32-Deposits of Compensatory Afforestation Fund Management and Planning Authority (CAMPA)" ಯಲ್ಲಿ ಠೇವಣಿ ಇಡುವಂತೆ ಈ ಮೂಲಕ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: FD 690 Expr-2/04, ದಿನಾಂಕ: 26.11.2004 ರಲ್ಲಿ ನೀಡಿದ ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಪಿ.ಆರ್. 1414 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಸುತ್ತೋಲೆ ಸಂಖ್ಯೆ: ಆನಾಸ 131 ಸಲಪ 2004, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2004**

**ವಿಷಯ:** ವಿವಿಧ ಇಲಾಖೆಗಳಲ್ಲಿ ಗ್ರಾಹಕರ ಪರ ಚಟುವಟಿಕೆಗಳನ್ನು ನಡೆಸುವ ಬಗ್ಗೆ.

ದಿನಾಂಕ: 23.2.2004 ರಂದು ನಡೆದ ಗ್ರಾಹಕ ರಕ್ಷಣಾ ಪರಿಷತ್ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಗ್ರಾಹಕ ಜಾಗೃತಿ ಕಾರ್ಯಕ್ರಮಗಳನ್ನು ಸಭೆ ಮತ್ತು ವೇದಿಕೆಗಳಲ್ಲಿ ಹಮ್ಮಿಕ್ಕೊಂಡಾಗ ವಿವಿಧ ಇಲಾಖೆಯಿಂದ ಸರ್ಕಾರದ ಯೋಜನೆಗಳ ವಿವರಗಳನ್ನು ತಿಳಿಸಲು ಇಲಾಖೆ ಪರಿಣಿತರು, ಕಾನೂನು ತಜ್ಞರು, ವ್ಯಾಪಾರ ತಜ್ಞರು ಹಾಗೂ ವಿವಿಧ ಕ್ಷೇತ್ರಗಳಲ್ಲಿ ಗ್ರಾಹಕ ಚಟುವಟಿಕೆ ಕುರಿತ ಅನುಭವ ಹೊಂದಿರುವ ವ್ಯಕ್ತಿಗಳು ಈ ಜಾಗೃತಿ ಸಮಾವೇಶಗಳಲ್ಲಿ ಭಾಗವಹಿಸಲು ಕ್ರಮ ಕೈಗೊಳ್ಳುವುದು. ಈ ರೀತಿ ಸಭೆ, ಸಮ್ಮೇಳನ ಸಮಾರಂಭಗಳನ್ನು ನಡೆಸಲು ಎಲ್ಲಾ ಜಿಲ್ಲಾಧಿಕಾರಿಗಳು, ತಹಶೀಲ್ದಾರರು, ಜಿಲ್ಲಾ ಪಂಚಾಯ್ತಿ ಹಾಗೂ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಕನಿಷ್ಠ ಪಕ್ಷ ವರ್ಷಕ್ಕೆ ಒಂದು ಸಭೆಯನ್ನು ನಡೆಸಲು ತಿಳಿಸಲಾಗಿದೆ.

ಗ್ರಾಹಕ ಪರ ಚಟುವಟಿಕೆಗಳನ್ನು ನಡೆಸುವ ನಿಟ್ಟಿನಲ್ಲಿ ಎಲ್ಲಾ ಇಲಾಖಾ ಮುಖ್ಯಸ್ಥರು ತಮ್ಮ ತಮ್ಮ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಇಲಾಖಾ ಕಾರ್ಯಕ್ರಮಗಳ ಪಟ್ಟಿ, ಕಾರ್ಯ ವಿಧಾನ ಕೈಪಿಡಿ, ನಾಗರೀಕ ಸನ್ನದು ಪ್ರಕಟಿಸಿ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಜನ ಸಾಮಾನ್ಯರಿಗೆ ಹಂಚುವ ಬಗ್ಗೆ ಕ್ರಮ ಕೈಗೊಳ್ಳಲು ಕೋರಲಾಗಿದೆ.

ಗ್ರಾಹಕರ ಪರ ಚಟುವಟಿಕೆಗಳನ್ನು ಅನುಷ್ಠಾನಗೊಳಿಸುವಲ್ಲಿ ಎಲ್ಲಾ ಅಧಿಕಾರಿ/ನೌಕರರು ಸಹಕರಿಸಿ, ಕಾರ್ಯಕ್ರಮವನ್ನು ಯಶಸ್ವಿಗೊಳಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ಎಂ.ಕೆ. ಬಲದೇವಕೃಷ್ಣ**

ಸರ್ಕಾರದ ಅಪರ ಕಾರ್ಯದರ್ಶಿ,

ಪಿ.ಆರ್. 1416 ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**FOREST, ECOLOGY AND ENVIRONMENT SECRETARIAT**

**ADDENDUM No. FEE 146 FLL 2004, Bangalore, Dated: 9th December 2004**

In Government Order No. FEE 193 FGL 2000, dated: 20.04.2001 in the order portion after condition No.'15' the following conditions No.16 to 21 shall be inserted.

16) The intervening areas between two wind mill foot prints shall be planted with dwarf tree species at the project cost. The State Government shall also consider developing medicinal plant gardens in available gaps in wind farms with possible help from National Medicinal Plant Board at user agency's cost.
17) Soil and moisture conservation measures like contour trenching shall be taken up on the hillocks supporting the wind mill at the cost of user agency.
18) Adequate fire protection measures, including employment of fire watchers and maintenance of fire lines etc. shall be undertaken by the user agency in the project area at its own cost.
19) Stabilisation of soil, boulders etc of road cut through breast wall/retaining wall shall be taken up by the user agencies.
20) Proper drainage along the approach roads shall be provided.
21) The vane tips of the wind turbine may be painted with orange colour as and when maintenance works of rotors are undertaken in future.

By Order and in the Name of the Governor of Karnataka,

**S.R. VATSALA**

P.R. 1418 Under Secretary to Government,

Forest, Ecology and Environment Department.

**ADDENDUM No. FEE 147 FLL 2004, Bangalore, Dated: 15th December 2004**

In Government Order No. FEE 276 FGL 99, dated: 2.4.2001 in the order portion after condition No.'7' the following conditions No.8 to 13 shall be inserted. The existing condition No.'8' shall be renumbered as condition No.'14'.

8) The intervening areas between two wind mill foot prints shall be planted with dwarf tree species at the project cost. The State Government shall also consider developing medicinal plant gardens in available gaps in wind farms with possible help from National Medicinal Plant Board at user agency's cost.
9) Soil and moisture conservation measures like contour trenching shall be taken up on the hillocks supporting the wind mill at the cost of user agency.

10) Adequate fire protection measures, including employment of fire watchers and maintenance of fire lines etc. shall be undertaken by the user agency in the project area at its own cost.
11) Stabilisation of soil, boulders etc of road cut through breast wall/retaining wall shall be taken up by the user agencies.
12) Proper drainage along the approach roads shall be provided.
13) The vane tips of the wind turbine may be painted with orange colour as and when maintenance works of rotors are undertaken in future.

By Order and in the Name of the Governor of Karnataka,

**S.R. VATSALA**

P.R. 1417

Under Secretary to Government,
Forest, Ecology and Environment Department.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀಮತಿ ನಾಗವೇಣಿ ಆರ್. ನಾಯ್ಕ, ಹಿರಿಯ ಬೆರಳಚ್ಚುಗಾರ್ತಿ, ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 18 ರಡಿಯಲ್ಲಿ ಸಲ್ಲಿಸಿದ ಮೇಲ್ಮನವಿ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಅವರ ಆದೇಶ ಸಂಖ್ಯೆ: ಕಂಶಾ:ಸಿಬ್ಬಂದಿ (1) ಇವಿ:ವಿನವ-2:2000-01 ದಿನಾಂಕ: 28.2.2002.
2. ಶ್ರೀಮತಿ ನಾಗವೇಣಿ ಆರ್. ನಾಯ್ಕ ಅವರು ದಿನಾಂಕ: 27.5.2002 ರಂದು ಸಲ್ಲಿಸಿರುವ ಮೇಲ್ಮನವಿ.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಆದೇಶದಲ್ಲಿ, ಶ್ರೀಮತಿ ನಾಗವೇಣಿ ಆರ್. ನಾಯ್ಕ ಅವರು ತಹಶೀಲ್ದಾರ್, ಸಿರಸಿ ಅವರ ಕಾರ್ಯಾಲಯದಲ್ಲಿ ಬೆರಳಚ್ಚುಗಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, 1999ನೇ ಸಾಲಿನ ಲೋಕಸಭೆ ಮತ್ತು ವಿಧಾನಸಭೆ ಚುನಾವಣೆಗೆ ಸಂಬಂಧಿಸಿದ ಮತಗಟ್ಟೆಗೆ ನೇಮಕ ಮಾಡಿದ ಸಿಬ್ಬಂದಿಗಳ ಆದೇಶವನ್ನು ಕಂಪ್ಯೂಟರಿಗೆ ಅಳವಡಿಸುವ ಬಗ್ಗೆ ಕಾರವಾರಕ್ಕೆ ಹೋಗಲು ನಿರಾಕರಿಸಿದ್ದರ ಹಿನ್ನಲೆಯಲ್ಲಿ ಮತ್ತು ದಿನಾಂಕ: 1.10.1999 ರಂದು ಮಧ್ಯಾಹ್ನ ಕಛೇರಿಗೆ ಅನಧಿಕೃತವಾಗಿ ಗೈರು ಹಾಜರಿದ್ದ ಬಗ್ಗೆ ನೀಡಲಾಗಿದ್ದ ನೋಟೀಸಿಗೆ ಉತ್ತರಿಸದೇ ಇದ್ದುದರ ಹಿನ್ನಲೆಯಲ್ಲಿ ಸಿ.ಸಿ.ಎ. ನಿಯಮಾವಳಿ 1957ರ ನಿಯಮ 8(iii) ರನ್ವಯ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿದು ಜಿಲ್ಲಾಧಿಕಾರಿಗಳು ಉತ್ತರ ಕನ್ನಡ ಜಿಲ್ಲೆ ಅವರು ಆದೇಶಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಆದೇಶವನ್ನು ಪ್ರಶ್ನಿಸಿ, ಶ್ರೀಮತಿ ನಾಗವೇಣಿ ಆರ್. ನಾಯ್ಕ ಅವರು ಉಲ್ಲೇಖ (2) ರಂತೆ ಮೇಲ್ಮನವಿ ಸಲ್ಲಿಸಿ, ತಮಗೆ ಕಂಪ್ಯೂಟರ್ ಅಳವಡಿಕೆ ಬಗ್ಗೆ ತರಬೇತಿ ಇಲ್ಲದ್ದರಿಂದ ಕಾರವಾರಕ್ಕೆ ಹೋಗಲಿಲ್ಲವೆಂದು ಮತ್ತು ತಮ್ಮ ಅನಾರೋಗ್ಯದ ಕಾರಣದಿಂದಾಗಿ ಹೋಗಲಾಗುವುದಿಲ್ಲವೆಂದು ಮೇಲಾಧಿಕಾರಿಗಳಿಗೆ ಮೌಖಿಕವಾಗಿ ತಿಳಿಸಿದ್ದರೂ ಸಹಾ ಬಲವಂತವಾಗಿ ಕಾರವಾರಕ್ಕೆ ಹೋಗಲು ಆದೇಶ ಮಾಡಿದಂತೆ, ಕೆಲಸ ಮಾಡಿಲ್ಲವೆಂದು ಮತ್ತು ದಿನಾಂಕ: 1.10.1999 ರಂದು ಮಧ್ಯಾಹ್ನ ಕಛೇರಿಗೆ ಅನಧಿಕೃತ ಗೈರು ಹಾಜರಾಗಿದ್ದು, ಅದು ಅಕಾಲಿಕ ಭಾರೀ ಮಳೆಯಿಂದಾಗಿರುವುದರಿಂದ ಸದರಿ ಗೈರು ಹಾಜರಿ ಉದ್ದೇಶಪೂರ್ವಕವಾಗಿಲ್ಲದಿರುವುದರಿಂದ ಜಿಲ್ಲಾಧಿಕಾರಿಗಳ ಆದೇಶವನ್ನು ರದ್ದುಪಡಿಸಲು ಕೋರಿರುತ್ತಾರೆ.

ಸದರಿಯವರ ಮೇಲ್ಮನವಿಯನ್ನು ದಿನಾಂಕ: 8.12.2004 ರಂದು ವಿಚಾರಣೆಗೆ ತೆಗೆದುಕೊಳ್ಳಲಾಯಿತು. ವಿಚಾರಣಾ ವೇಳೆಯಲ್ಲಿ ಹಾಜರಿದ್ದ ಮೇಲ್ಮನವಿದಾರರು ತಾವು ದಿನಾಂಕ: 1.10.1999 ರಂದು ಗೈರು ಹಾಜರಾದದ್ದಕ್ಕೆ ತನ್ನ ಅನಾರೋಗ್ಯವೇ ಕಾರಣವೆಂದು ಮತ್ತು ಕಾರ್ಯ ವಿಧಾನದಲ್ಲಿ ಯಾವುದೇ ವ್ಯತ್ಯಯ ಉಂಟಾಗಿರುವುದಿಲ್ಲವೆಂದು ಹೇಳಿಕೆ ನೀಡಿ ಶಿಕ್ಷೆಯನ್ನು ಉದ್ದೇಶಪೂರ್ವಕವಾಗಿ ವಿಧಿಸಿರುವುದರಿಂದ ಅದನ್ನು ರದ್ದುಪಡಿಸಿ ಆದೇಶಿಸುವಂತೆ ಮನವಿ ಮಾಡಿಕೊಂಡಿರುತ್ತಾರೆ. ವಿಚಾರಣೆಯ ನಂತರ, ಈ ಪ್ರಕರಣವನ್ನು ಆದೇಶಕ್ಕಾಗಿ ಕಾಯ್ದಿರಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 380 ಎಂವಿಎಸ್ 2004, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2004**

ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಮೇಲ್ಮನವಿಯಲ್ಲಿ ಎತ್ತಿರುವ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿದೆ. ವಿಚಾರಣೆ ವೇಳೆಯಲ್ಲಿ ನೀಡಿದ ಹೇಳಿಕೆಯನ್ನು ಸಮರ್ಥಿಸುವ ಪೂರಕ ದಾಖಲೆಗಳನ್ನು ಒದಗಿಸಿಲ್ಲದ ಕಾರಣ ಅವರ ಹೇಳಿಕೆಯನ್ನು ಒಪ್ಪಲು ಸಾಧ್ಯವಿರುವುದಿಲ್ಲ. ಆದ್ದರಿಂದ, ದಿನಾಂಕ: 28.2.2002ರ ಆದೇಶದಲ್ಲಿ ಉತ್ತರ ಕನ್ನಡ ಜಿಲ್ಲಾಧಿಕಾರಿಗಳು ವಿಧಿಸಿದ ದಂಡನೆಯನ್ನು ಎತ್ತಿ ಹಿಡಿದು ಮೇಲ್ಮನವಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 1415

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಕಾಲೇಜುಗಳ ಅಭಿವೃದ್ಧಿಗೆ ಭಾರತ ಸರ್ಕಾರವು ಮಂಜೂರು ಮಾಡಿರುವ ಹಣವನ್ನು ಸಂಬಂಧಿಸಿದ ಸಂಸ್ಥೆಗಳಿಗೆ ಪಾವತಿಸಲು ಆಯವ್ಯಯ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಇವರ ಪತ್ರ ಸಂಖ್ಯೆ, ಭಾವೈಪ 80 :ಬಿಯುಡಿ (1):2004-2005, ದಿನಾಂಕ: 10.9.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರು ಭಾರತ ಸರ್ಕಾರವು ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿಯ ಅಭಿವೃದ್ಧಿಗೆ ಉತ್ತೇಜನ ನೀಡಲು ಭಾರತೀಯ ವೈದ್ಯ ಪದ್ಧತಿ ಕಾಲೇಜುಗಳ ಅಭಿವೃದ್ಧಿಗಾಗಿ ಸಹಾಯಾನುಧನವನ್ನು ವಿವಿಧ ಸ್ಕೀಂಗಳಡಿ ಮಂಜೂರು ಮಾಡುತ್ತದೆ. ಪ್ರಸ್ತುತ ಭಾರತ ಸರ್ಕಾರವು ಬಿಡುಗಡೆ ಮಾಡಿದ ಅನುದಾನಗಳ ಹಣವು ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿದ್ದು, ಈ ಬಗ್ಗೆ ಆರ್ಥಿಕ ಇಲಾಖೆಯು 'ಕ್ರೆಡಿಟ್ ಕನ್‌ಫರ್‌ಮೇಷನ್ ಸ್ಲಿಪ್' ನೀಡಿದೆ. ಸದರಿ ಹಣವನ್ನು

ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯು ಸಂಬಂಧಪಟ್ಟ ಸಂಸ್ಥೆಗೆ ಬಿಡುಗಡೆ ಮಾಡಬೇಕಾಗಿರುವುದಾಗಿ ನಿರ್ದೇಶಕರು ತಿಳಿಸಿ, ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿರುವ ಹಣದ ವಿವರ ಕೆಳಗಿನಂತೆ ದಾಖಲಿಸಲಾಗಿದೆ.

| ಕ್ರಮ ಸಂಖ್ಯೆ | ಕೇಂದ್ರ ಸರ್ಕಾರದಿಂದ ಹಣ ಬಿಡುಗಡೆ ಪತ್ರದ ವಿವರ | ಅನುದಾನ ಪಡೆದ ಸಂಸ್ಥೆ | ಅನುದಾನದ ಮೊತ್ತ ರೂ. ಲಕ್ಷಗಳಲ್ಲಿ | ಆರ್ಥಿಕ ಇಲಾಖೆಯು ಸಿ.ಸಿ. ಸ್ಲಿಪ್ ನೀಡಿದ ದಿನಾಂಕ |
|---|---|---|---|---|
| 1 | ಜಡ್.15011/112004 ಇ ಅಂಡ್ ಸಿ, ಭಾರತ ಸರ್ಕಾರ, ಆಯುಷ್ ಇಲಾಖೆ ದಿನಾಂಕ: 21.7.2004. | 1) ಶ್ರೀ ಬಿ.ಎಂ. ಕಂಕಣವಾಡಿ ಆಯುರ್ವೇದ ಕಾಲೇಜು, ಶಹಪುರ್, ಬೆಳಗಾಂ. | ರೂ.20.00 ಲಕ್ಷಗಳು | 18.8.2004 |
| | | **ಒಟ್ಟು** | **ರೂ.20.00 ಲಕ್ಷಗಳು** | |

ಪ್ರಸಕ್ತ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2210-05-200-0-05 ಯೋಜನೆಯಡಿ ಭಾರತ ಸರ್ಕಾರದ (ಶೇಕಡಾ 100 ಕೇಂದ್ರ ಪುರಸ್ಕೃತ) ಭಾರತ ಸರ್ಕಾರ ನೀಡುವ ಸಹಾಯಾನುಧನವನ್ನು ಸಂಬಂಧಿಸಿದ ಸಂಸ್ಥೆಗೆ ಅನುವಾಗಲು ರೂ.300.00 ಲಕ್ಷ ಅನುದಾನ ಒದಗಿಸಿಕೊಳ್ಳಲಾಗಿದೆ. ಅಲ್ಲದೆ ಇದು ಶೇ.100 ರ ಕೇಂದ್ರ ಪುರಸ್ಕೃತ ಯೋಜನೆ ಆಗಿರುವುದರಿಂದ ರಾಜ್ಯ ಸರ್ಕಾರದ ಬೊಕ್ಕಸಕ್ಕೆ ಇದು ಹೊರೆಯಾಗುವುದಿಲ್ಲ. ಆದ್ದರಿಂದ ಸರ್ಕಾರವು ಪ್ರಸ್ತಾವನೆಯನ್ನು ಪರಿಗಣಿಸಿ ಭಾರತ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನವನ್ನು ಬೆಳಗಾಂವ ನ ಶ್ರೀ ಬಿ.ಎಂ. ಕಂಕವಾಡಿ ಆಯುರ್ವೇದ ಕಾಲೇಜಿಗೆ ಪಾವತಿಸಲು ರೂ.20.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2210-05-200-0-05 ಯೋಜನೆ ಉಪಲೆಕ್ಕ ಶೀರ್ಷಿಕೆ ಅಡಿ ಆಯವ್ಯಯ ಬಿಡುಗಡೆ ಮಾಡಲು ನಿರ್ದೇಶಕರು ಕೋರಿರುತ್ತಾರೆ.

ಆದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 331 ಪಿಟಿಡಿ 2004, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, ಬೆಳಗಾಂವನ ಶ್ರೀ ಬಿ.ಎಂ. ಕಂಕವಾಡಿ ಆಯುರ್ವೇದ ಕಾಲೇಜಿಗೆ ಪ್ರಸ್ತುತ 2004-2005ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2210-05-200-0-05ರ ಉಪಲೆಕ್ಕ ಶೀರ್ಷಿಕೆ 101 ಸಹಾಯಾದಾನದ ಯೋಜನೆ ಅಡಿಯಲ್ಲಿ ರೂ.300.00 ಲಕ್ಷಗಳ ಅನುದಾನ ಒದಗಿಸಿದ್ದು ಈ ಅನುದಾನದ ಪೈಕಿ ಒಟ್ಟು ರೂ.20.00 ಲಕ್ಷಗಳನ್ನು ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 1412 ಅಂಆಸ 2004, ದಿನಾಂಕ: 04.11.2004ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್ ಜಿ.**

ಪಿ.ಆರ್. 1419 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಪ್ರೊ. ಎಸ್. ಇಂದುಧರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಎಸ್‌ಇಎನ್ 2003, ದಿನಾಂಕ: 6.7.2004.

2. ಶ್ರೀ ಪ್ರೊ. ಎಸ್. ಇಂದುಧರ, ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರ ವರದಿ ದಿನಾಂಕ: 8.11.2004.

**ಪ್ರಸ್ತಾವನೆ:**

ಶ್ರೀ ಬಿ.ಎನ್. ಸುರೇಶ್, ಕೆ.ಎ.ಎಸ್. ಅಧಿಕಾರಿರವರು ಕರ್ನಾಟಕ ರಾಜ್ಯ ಹೆದ್ದಾರಿ ಅನುಷ್ಠಾನ ಘಟಕ ಇಲ್ಲಿ ಮುಖ್ಯ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 11.7.2002 ರಿಂದ 17.6.2003ರ ವರೆಗೆ ರಜೆ ಮಂಜೂರು ಮಾಡಿಸಿಕೊಳ್ಳದೆ ಗೈರುಹಾಜರಾಗಿರುವ ಆರೋಪದ ಬಗ್ಗೆ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 6.7.2004 ಸರ್ಕಾರಿ ಆದೇಶದಲ್ಲಿ ಶ್ರೀ ಪ್ರೊ.ಎಸ್. ಇಂದುಧರ, ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 8.11.2004ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವ ಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2004**

ಸರ್ಕಾರವು ಶ್ರೀ ಪ್ರೊ.ಎಸ್. ಇಂದುಧರ ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.4.1998 ರನ್ವಯ 5,000/- (ಐದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರನ್ವಯ 1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-014 ಇತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ವಾಸುದೇವಮೂರ್ತಿ**

ಪಿ.ಆರ್. 1421 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆ ಹೊಳೇನರಸೀಪುರ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಸ್ತೆಶಾಖೆ:ಮೇಲ್ದರ್ಜೆ:ಸಇಂ7:2004-05, ದಿನಾಂಕ: 18.11.2004 ಹಾಗೂ ದಿನಾಂಕ: 22.11.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹಾಸನ ಜಿಲ್ಲೆ ಹೊಳೇನರಸೀಪುರ ತಾಲ್ಲೂಕಿನ ಈ ಕೆಳಕಂಡ 10 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | | |
|---|---|---|
| 1) | ಬಿ.ಟಿ. ರಸ್ತೆಯಿಂದ ಅಲಗಾಡನಹಳ್ಳಿ ರಸ್ತೆ | 0.60 ಕಿಮೀ |
| 2) | ಬಿ.ಟಿ. ರಸ್ತೆಯಿಂದ ಚಿಕ್ಕಕಾಡನೂರು ರಸ್ತೆ | 0.60 ಕಿಮೀ |
| 3) | ಬಿ.ಟಿ. ರಸ್ತೆಯಿಂದ ಚಿಕ್ಕನಕೊಪ್ಪಲು ರಸ್ತೆ | 0.90 ಕಿಮೀ |
| 4) | ಬಿ.ಟಿ. ರಸ್ತೆಯಿಂದ ಬಾಚನಹಳ್ಳಿ ಕಬ್ಬೂರು ರಸ್ತೆ | 1.80 ಕಿಮೀ |
| 5) | ಸಿ.ಎನ್. ರಸ್ತೆಯಿಂದ ಹೂವಿನಹಳ್ಳಿ ಕುಂಕುಮದ ಹೊಸೂರು ಉಣೇನಹಳ್ಳಿ ಅಗ್ರಹಾರದ ಗೇಟ್ ರಸ್ತೆ | 8.00 ಕಿಮೀ |
| 6) | ಬನುಕುಪ್ಪೆ-ಶಿವಪುರ-ಕಾಮೇನಹಳ್ಳಿ ರಸ್ತೆ | 4.00 ಕಿಮೀ |
| 7) | ಗೊರೂರು-ಮಾವಿಕೆರೆ ರಸ್ತೆಯಿಂದ ಬಸವನಾಯಕನಹಳ್ಳಿ-ಹನುಮನಹಳ್ಳಿ ರಸ್ತೆ | 4.30 ಕಿಮೀ |
| 8) | ಬಿ.ಟಿ. ರಸ್ತೆಯಿಂದ ಕಡವಿನಹೊಸಹಳ್ಳಿ ರಸ್ತೆ | 2.50 ಕಿಮೀ |
| 9) | ಹೊಳೇನರಸೀಪುರ-ಸಾಲಿಗ್ರಾಮ ರಸ್ತೆಯಿಂದ ಹೊನ್ನಾವರ ರಸ್ತೆ | 0.70 ಕಿಮೀ |
| 10) | ಹೊಳೇನರಸೀಪುರ-ಅರಕಲಗೂಡು ರಸ್ತೆಯಿಂದ ಕೃಷ್ಣಾಪುರ ರಸ್ತೆ | 1.10 ಕಿಮೀ |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 128 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ 10 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| | | |
|---|---|---|
| 1) | ಬಿ.ಟಿ. ರಸ್ತೆಯಿಂದ ಅಲಗಾಡನಹಳ್ಳಿ ರಸ್ತೆ | 0.60 ಕಿಮೀ |
| 2) | ಬಿ.ಟಿ. ರಸ್ತೆಯಿಂದ ಚಿಕ್ಕಕಾಡನೂರು ರಸ್ತೆ | 0.60 ಕಿಮೀ |
| 3) | ಬಿ.ಟಿ. ರಸ್ತೆಯಿಂದ ಚಿಕ್ಕನಕೊಪ್ಪಲು ರಸ್ತೆ | 0.90 ಕಿಮೀ |
| 4) | ಬಿ.ಟಿ. ರಸ್ತೆಯಿಂದ ಬಾಚನಹಳ್ಳಿ ಕಬ್ಬೂರು ರಸ್ತೆ | 1.80 ಕಿಮೀ |
| 5) | ಸಿ.ಎನ್. ರಸ್ತೆಯಿಂದ ಹೂವಿನಹಳ್ಳಿ ಕುಂಕುಮದ ಹೊಸೂರು ಉಣೇನಹಳ್ಳಿ ಅಗ್ರಹಾರ ಗೇಟ್ ರಸ್ತೆ | 8.00 ಕಿಮೀ |
| 6) | ಬನುಕುಪ್ಪೆ-ಶಿವಪುರ-ಕಾಮೇನಹಳ್ಳಿ ರಸ್ತೆ | 4.00 ಕಿಮೀ |
| 7) | ಗೊರೂರು-ಮಾವಿಕೆರೆ ರಸ್ತೆಯಿಂದ ಬಸವನಾಯಕನಹಳ್ಳಿ-ಹನುಮನಹಳ್ಳಿ ರಸ್ತೆ | 4.30 ಕಿಮೀ |
| 8) | ಬಿ.ಟಿ. ರಸ್ತೆಯಿಂದ ಕಡವಿನಹೊಸಹಳ್ಳಿ ರಸ್ತೆ | 2.50 ಕಿಮೀ |
| 9) | ಹೊಳೇನರಸೀಪುರ-ಸಾಲಿಗ್ರಾಮ ರಸ್ತೆಯಿಂದ ಹೊನ್ನಾವರ ರಸ್ತೆ | 0.70 ಕಿಮೀ |
| 10) | ಹೊಳೇನರಸೀಪುರ-ಅರಕಲಗೂಡು ರಸ್ತೆಯಿಂದ ಕೃಷ್ಣಾಪುರ ರಸ್ತೆ | 1.10 ಕಿಮೀ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 1428 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಕಂದಾಯ ಸಚಿವಾಲಯ

**ಆದೇಶ ಸಂಖ್ಯೆ: ಕಂಇ 196 ಮುಸೇವಿ 2004 (ಭಾಗ-1), ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2004**

ಗೋಮಟೇಶ್ವರ ಭಗವಾನ್ ಶ್ರೀ ಬಾಹುಬಲಿ ಮಹಾಮಸ್ತ ಕಾಭೀಷೇಕ ಮಹೋತ್ಸವ 2006 ಸಮಿತಿ ರಚನೆ ಕುರಿತು ಸರ್ಕಾರದ ಆದೇಶ ಸಂಖ್ಯೆ: ಕಂಇ 196 ಮುಸೇವಿ 2004 ದಿನಾಂಕ: 12.08.2004ರ ಆದೇಶದಲ್ಲಿ ರಚಿಸಿರುವ ರಾಜ್ಯ ಮಟ್ಟದ ಸಮಿತಿಗೆ ಈ ಕೆಳಕಂಡ ಸದಸ್ಯರುಗಳನ್ನು ಸೇರ್ಪಡೆಗೊಳಿಸಿ, ಆದೇಶಿಸಿದೆ.

**ಸರ್ಕಾರದ ಅಧಿಕಾರಿಗಳು**

21) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

22) ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲಾ ಪೊಲೀಸ್, ಹಾಸನ ಜಿಲ್ಲೆ, ಹಾಸನ.

23) ಶ್ರೀ ಎಸ್.ವಿ.ಪಿ. ಹಳಕಟ್ಟಿ, Superintending Archaeologist, ASI, Bangalore circle, Bangalore.

**ಕ್ಷೇತ್ರದ ಹಾಗೂ ಸಮಾಜದ ಪ್ರತಿನಿಧಿಗಳು**

12) ಶ್ರೀ ಜಿ.ಡಿ. ಜ್ವಾಲಾಕುಮಾರ್, ನಿವೃತ್ತ ಜಂಟಿ ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ.

13) ಶ್ರೀ ಜಿನಾದತ್ ದೇಸಾಯಿ, ನಂ.190, ಮಹಾಂತೇಶ್ ನಗರ, ಬೆಳಗಾಂ.

14) ಶ್ರೀ ಪಂಪಕವಿ ಆರ್. ಬೆಳಗಲಿ, ಜಮಖಂಡಿ, ಬಿಜಾಪುರ ಜಿಲ್ಲೆ.

15) ಶ್ರೀ ವಿ.ಸಿ. ಬ್ರಹ್ಮರಾಯಪ್ಪ, ಹೈಕೋರ್ಟು ನ್ಯಾಯವಾದಿಗಳು, ನಂ.302, 11ನೇ ಎ ಕ್ರಾಸ್, 20ನೇ ಮುಖ್ಯ ರಸ್ತೆ, ಜೆ.ಪಿ. ನಗರ ನೇ ಹಂತ, ಬೆಂಗಳೂರು-560078.

16) ಶ್ರೀ ಇಂದ್ರಕುಮಾರ್, ನಿವೃತ್ತ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಮತ್ತು ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ.514, 8ನೇ ಕ್ರಾಸ್, ಜೆ.ಪಿ.ನಗರ 3ನೇ ಹಂತ, ಬೆಂಗಳೂರು-560078

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 1430 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಹೆಚ್. ಶ್ರೀನಿವಾಸ್, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಪ್ರಸ್ತಾವನೆ:**

ಶ್ರೀ ಹೆಚ್. ಶ್ರೀನಿವಾಸ್, ಸಹಾಯಕ ಔಷಧ ನಿಯಂತ್ರಕರು, ಕೋಲಾರ ವೃತ್ತ, ಕೋಲಾರ ಇವರು ಸ್ಥಳೀಯ ದಿನ ಪತ್ರಿಕೆಯಲ್ಲಿ ಜನಪ್ರತಿನಿಧಿಗಳಾದ ಮಾನ್ಯ ಶಾಸಕರ ಬಗ್ಗೆ ಅವಹೇಳನಾಕಾರಿ ಹೇಳಿಕೆಗಳನ್ನು ನೀಡಿರುವುದು ಪತ್ರಿಕೆಯಲ್ಲಿ ವರದಿಯಾಗಿರುತ್ತದೆ. ಸದರಿಯವರ ಈ ನಡವಳಿಕೆಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(iii) ರಂತೆ ಸರ್ಕಾರಿ ನೌಕರರ ನಡೆತೆಗೆ ತಕ್ಕದಲ್ಲದ ರೀತಿಯಲ್ಲಿ ವರ್ತಿಸಿರುವುದು ಕಂಡುಬರುತ್ತದೆ. ಆದರಿಂದ ಸರ್ಕಾರವು ಸದರಿಯವರ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಅಮಾನತ್ತಿನಲ್ಲಿಟ್ಟು ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿದೆ, ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 201 ಐಎಂಎಂ 2004, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಔಷಧ ನಿಯಂತ್ರಣ ಇಲಾಖೆಯ ಶ್ರೀ ಹೆಚ್. ಶ್ರೀನಿವಾಸ್, ಸಹಾಯಕ ಔಷಧ ನಿಯಂತ್ರಕರು, ಕೋಲಾರ ವೃತ್ತ, ಕೋಲಾರ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ನಿಯಮ 10(1)(ಡಿ) ರನ್ವಯ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿರಿಸಲಾಗಿದೆ.

ಸದರಿ ಅಧಿಕಾರಿಯು ಅಮಾನತ್ತಿನ ಅವಧಿಯಲ್ಲಿ ಸರ್ಕಾರದ ಪೂರ್ವಾನುಮತಿಯಿಲ್ಲದೇ ಕೇಂದ್ರ ಸ್ಥಾನವನ್ನು ಬಿಡತಕ್ಕದಲ್ಲ. ಸದರಿಯವರು ಅಮಾನತ್ತಿನಲ್ಲಿಡಲಾದ ಅವಧಿಯಲ್ಲಿ ನಿಯಮಾನುಸಾರ ಜೀವನಾಧಾರ ಭತ್ಯೆಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್ ಜಿ.**

ಪಿ.ಆರ್. 1440 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕನ್ನಡ ಭವನ ಹಾಗೂ ರವೀಂದ್ರ ಕಲಾಕ್ಷೇತ್ರಕ್ಕೆ ಸ್ವಚ್ಛತೆ ಮತ್ತು ನಿರ್ವಹಣೆ ಕುರಿತು ಗುತ್ತಿಗೆ ಸೇವಾ ಸಂಸ್ಥೆಗಳ ಮೂಲಕ ಸಿಬ್ಬಂದಿ ತೆಗೆದುಕೊಳ್ಳಲು ಕೋರಿ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಸನಿ 1 ಕಭಗುಸೇ 2004-05, ದಿನಾಂಕ: 24.6.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ, ನಿರ್ದೇಶಕರು, ರವೀಂದ್ರ ಕಲಾ ಕ್ಷೇತ್ರ ಮತ್ತು ಕನ್ನಡ ಭವನದ ಸ್ವಚ್ಛತೆ ಮತ್ತು ನಿರ್ವಹಣೆ ಕುರಿತಂತೆ ಸ್ವಾಗತಕಾರ ಹಾಗೂ 5(ಐದು) ಸ್ವಚ್ಛತಾಗಾರ ಹುದ್ದೆಗಳಿಗೆ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲು ಅವಶ್ಯಕತೆ ಇದ್ದು, ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಮ 1999ರ ನಿಯಮ 4(ಇ)(ii)ರ ಅನ್ವಯ ಟೆಂಡರುಗಳನ್ನು ಕರೆದಿದ್ದು, ಸದರಿ ಟೆಂಡರ್‌ಗಳಲ್ಲಿ ಭಾಗವಹಿಸಿದ ಮೆ. ಎನ್.ಜಿ. ನಾರಾಯಣ ಗೌಡ, ಗುತ್ತಿಗೆದಾರರು, ಕಾರ್ಮಿಕ ಗುತ್ತಿಗೆ ಕಾಯ್ದೆ ಅನ್ವಯ, ಸ್ವಾಗತಕಾರನಿಗೆ ರೂ.3418.00 ಮತ್ತು ಸ್ವಚ್ಛತಾಗಾರನಿಗೆ ರೂ.2530.00 ರಂತೆ ಮಾಸಿಕ ವೇತನ ನಿಗದಿಪಡಿಸಿದ್ದು, ಸದರಿ ದರಗಳನ್ನು ಒಪ್ಪಿದ್ದು, ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ: 1.6.2004 ರಿಂದ ದಿನಾಂಕ: 31.5.2005ರ ವರೆಗೆ ಒಟ್ಟು ರೂ.1,92,816.00 ಗಳು ವೆಚ್ಚವಾಗಲಿದ್ದು ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-800-0-01 (ಯೋಜನೇತರ) ಅಡಿ ಭರಿಸಲು ಅನುಮತಿ ಹಾಗೂ ಸರ್ಕಾರದ ಆದೇಶ ಹೊರಡಿಸಲು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಗಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 57 ಕಸನಿ 2004, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ, ರವೀಂದ್ರ ಕಲಾ ಕ್ಷೇತ್ರ ಮತ್ತು ಕನ್ನಡ ಭವನದ ಸ್ವಚ್ಛತೆ ಮತ್ತು ನಿರ್ವಹಣೆ ಕುರಿತಂತೆ ಸ್ವಾಗತಕಾರ ಹಾಗೂ ಸ್ವಚ್ಛತಾಗಾರ ಹುದ್ದೆಗಳಿಗೆ ದಿನಾಂಕ: 1.6.2004 ರಿಂದ ದಿನಾಂಕ: 31.5.2005ರ ವರೆಗಿನ ಮಾಸಿಕ ವೇತನ ಒಟ್ಟು ವೆಚ್ಚದ ಹಣ ರೂ.1,92,816.00 (ಅಕ್ಷರದಲ್ಲಿ ಒಂದು ಲಕ್ಷ ತೊಂಬತ್ತೆರಡು ಸಾವಿರದ ಎಂಟನೂರ ಹದಿನಾರು ರೂಪಾಯಿಗಳು ಮಾತ್ರ) ಗಳನ್ನು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನಿರ್ದೇಶಕರಿಗೆ ಮಂಜೂರು ಮಾಡಿ ಬಿಡುಗಡೆ ಮಾಡಲು ಆದೇಶ ಹೊರಡಿಸಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-800-0-01 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 465 ಐಎಫ್‌ಎ (ಬಿ.ಎ.) 2004 ದಿನಾಂಕ: 27.9.2004 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ. 1842 ವೆಚ್ಚ-5 2004 ದಿನಾಂಕ: 3.11.2004ರ ಸಹಮತಿ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್.ಡಿ.1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1443 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ವೃತ್ತಿ ಶಿಕ್ಷಣ (ಜೆಓಸಿ) ಪರೀಕ್ಷೆಗಳ ಪರೀಕ್ಷಾ ಮೌಲ್ಯ ಮಾಪನ ಸಂಭಾವನೆ, ಪರಿಷ್ಕರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಇಡಿ 3 ಟಿವಿಇ 93, ದಿನಾಂಕ: 2.12.93.

2. ನಿರ್ದೇಶಕರು ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿವಿಇ.16.ಸಿಬದಿ:ಪ.ಸಂ:ಪರಿಷ್ಕರಣೆ. ಆ.ವಿ:01:2003, ದಿನಾಂಕ: 24.4.2003, 5.2.2004 ಮತ್ತು 26.5.2004.

3. ಸರ್ಕಾರಿ ಆದೇಶ ಸಂಖ್ಯೆ: ಇಡಿ 18 ಡಿಜಿಎ 2003 ದಿನಾಂಕ: 12.5.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (3)ರ ದಿನಾಂಕ: 12.5.2004ರ ಆದೇಶದ ಮೂಲಕ ಪರೀಕ್ಷಾ ಮೌಲ್ಯಮಾಪಕರುಗಳಿಗೆ ಪ್ರತಿ ಉತ್ತರ ಪತ್ರಿಕೆ ಮೌಲ್ಯಮಾಪನಕ್ಕೆ ಚಾಲ್ತಿಯಲ್ಲಿದ್ದ ರೂ.5.50 ರಿಂದ 6.50ಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು. ಆದರೆ ಈ ದರ ಅತೀ ಕಡಿಮೆಯಾಗಿದ್ದು, ಪದವಿ ಪೂರ್ವ ಶಿಕ್ಷಣದ ಮೌಲ್ಯಮಾಪನದ ದರಕ್ಕೆ ಸಮನಾಗಿಲ್ಲವೆಂದು ಜೆಓಸಿ ಉಪನ್ಯಾಸಕರುಗಳು ಮೌಲ್ಯಮಾಪನ ಕಾರ್ಯದಿಂದ ಬಹಿಷ್ಕಾರ ಮುಂದುವರಿಸಿರುತ್ತಾರೆಂದು, ಆದ್ದರಿಂದ ಈಗಾಗಲೇ ಹೆಚ್ಚಿಸಲಾದ ಪರೀಕ್ಷಾ ಸಂಭಾವನೆಯನ್ನು ಪುನರ್ ಪರಿಶೀಲಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ವೃತ್ತಿ ಶಿಕ್ಷಣ ನಿರ್ದೇಶಕರು ಸರ್ಕಾರಕ್ಕೆ ವಿವರವಾದ ಪ್ರಸ್ತಾವನೆ ಸಲ್ಲಿಸಿದ್ದಾರೆ.

ನಿರ್ದೇಶಕರ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿದೆ. ವೃತ್ತಿ ಶಿಕ್ಷಣ ಕೋರ್ಸುಗಳು ಪದವಿ ಪೂರ್ವ ಶಿಕ್ಷಣಕ್ಕೆ ಸಮವಲ್ಲ ಎಂದು ಸನ್ಮಾನ್ಯ ಭಾರತದ ಸರ್ವೋಚ್ಚ ನ್ಯಾಯಾಲಯ ಮಹಾಲಿಂಗೇಗೌಡ ಪ್ರಕರಣದಲ್ಲಿ ಹೇಳಿದೆ. ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 27 ಟಿವಿಇ 2004 (3), ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ದಿನಾಂಕ: 15.5.2004 ಸಂಖ್ಯೆ: ಇಡಿ 18 ಡಿಜಿಎ 2003 ರಲ್ಲಿನ ಆದೇಶವನ್ನು ಭಾಗಶಃ ಮಾರ್ಪಡಿಸಿ, ಪರೀಕ್ಷಾ ಮೌಲ್ಯಮಾಪಕರುಗಳಿಗೆ ಪ್ರತಿ ಉತ್ತರ ಪತ್ರಿಕೆ ಮೌಲ್ಯಮಾಪನಕ್ಕೆ ಈ ಹಿಂದೆ ಚಾಲ್ತಿಯಲ್ಲಿದ್ದ ರೂ.5.50 (ಐದು ರೂಪಾಯಿ ಐವತ್ತು ಪೈಸೆ ಮಾತ್ರ) ರಿಂದ ರೂ.7.50 (ಏಳು ರೂಪಾಯಿ ಐವತ್ತು ಪೈಸೆ ಮಾತ್ರ) ಗಳಿಗೆ ಪರಿಷ್ಕರಿಸಿ ಆದೇಶಿಸಿದೆ. ಹಾಗೂ daily allowance ಅನ್ನು ಈಗಿರುವ ರೂ.150/-ಕ್ಕೆ ಸೀಮಿತಗೊಳಿಸಿ ಆದೇಶಿಸಿದೆ; and it is also ordered that no new category of official to be added to the existing structure of evaluation for remuneration purposes.

ಈ ಆದೇಶವನ್ನು ದಿನಾಂಕ: 10.6.2004ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ.527.exp-8:2004 ಹಾಗೂ ದಿನಾಂಕ: 26.10.2004ರ ಟಿಪ್ಪಣಿ ಸಂಖ್ಯೆ: FD.953 Exp-8:2004 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಪಿ.ಆರ್. 1445 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ಎಸ್.ಬಿ. ಹವಜೀ, ಕೃಷಿ ಅಧಿಕಾರಿ, ಸಿಂಧಗಿ, ಇವರ ಕರ್ತವ್ಯ ನಿರ್ಲಕ್ಷತೆ ಬಗ್ಗೆ ಸೇವೆಯಿಂದ ಅಮಾನತ್ತುಗೊಳಿಸುವ ಆದೇಶ.

**ಓದಲಾಗಿದೆ:** 1. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಪತ್ರ ಸಂಖ್ಯೆ: ಎಸ್‌ಸಿಎಂ 691:04, ದಿನಾಂಕ: 25.9.2004.

2. ಸಿಬ್ಬಂದಿ 1 ವಿಚಾರಣೆ 5:15:04-05, ದಿನಾಂಕ: 10.11.2004.

**ಪ್ರಸ್ತಾವನೆ:**

ಶ್ರೀ ಎಸ್.ಬಿ. ಹವಜೀ, ಕೃಷಿ ಅಧಿಕಾರಿ, ಸಿಂಧಗಿ ರವರು ತಾಲ್ಲೂಕಿನ ರೈತರಿಗೆ ಸರ್ಕಾರದಿಂದ ರಿಯಾಯಿತಿ ದರದಲ್ಲಿ ಬಂದ ಬೀಜ ಗೊಬ್ಬರಗಳನ್ನು ಕಾಳಸಂತೆಯಲ್ಲಿ ಮಾರಾಟ ಮಾಡುತ್ತಿದ್ದು ಮತ್ತು ಬೊಗಸ್ ರಶೀದಿ ಸೃಷ್ಟಿ ಮಾಡಿ ಹಲವಾರು ರೈತರಿಗೆ ಮೋಸ ಮಾಡಿ ಕರ್ತವ್ಯ ಚ್ಯುತಿ ಎಸಗಿರುವುದು ಮೇಲ್ನೋಟಕ್ಕೆ ಸಾಭೀತಾಗಿರುತ್ತದೆಂದು ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಬಹುದೆಂದು ಮೇಲೆ (2) ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಕೃಷಿ ಆಯುಕ್ತರು ವರದಿ ಮಾಡಿದ್ದಾರೆ.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎಸ್.ಬಿ. ಹವಜೀ, ಕೃಷಿ ಅಧಿಕಾರಿಯವರು ಗಂಭೀರವಾದ ಕರ್ತವ್ಯ ನಿರ್ಲಕ್ಷತೆ ತೋರಿಸುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಅವರ ವಿರುದ್ಧ ಶಿಸ್ತು ಕ್ರಮ ಬಾಕಿಯಿರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 60 ಕೃಪವಿ 2004, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10 ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಶ್ರೀ ಎಸ್.ಬಿ. ಹವಜೀ, ಕೃಷಿ ಅಧಿಕಾರಿ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಸಿಂಧಗಿ ರವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಸದರಿಯವರು ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ. ಹಾಗೂ ಅಮಾನತ್ತಿನ ಅವಧಿಯಲ್ಲಿ ನಿಯಮಾನುಸಾರ ಜೀವನಾಂಶ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಪ್ರೇಮಚಂದ್ರ**

ಪಿ.ಆರ್. 1446 ಪೀಠಾಧಿಕಾರಿ, (ಕೃಷಿ-2) ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ರಾಜ್ಯದ ಸಕ್ಕರೆ ಕಾರ್ಖಾನೆಗಳು ರಫ್ತು ಮಾಡಿದ ಸಕ್ಕರೆಗೆ ಪ್ರತಿ ಮೆ.ಟನ್‌ಗೆ ರೂ.1,000ಗಳಂತೆ ರಫ್ತು ಸಹಾಯಧನ ನೀಡುವ ಬಗ್ಗೆ ಆಡಳಿತಾತ್ಮಕ ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ:ಸಿಐ 231 ಎಸ್‌ಜಿಎಫ್ 03 ದಿನಾಂಕ 10.09.2003.

2. ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂ;ಡಿಎಸ್‌ಕೆ:ಎಸ್‌ಟಿಟಿ:11:2003-04 ದಿನಾಂಕ 16.08.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2002-03ನೇ ಸಾಲಿನಲ್ಲಿ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಕಬ್ಬು ಖರೀದಿ ಹಣವನ್ನು ಬಾಕಿ ಉಳಿಸಿಕೊಂಡಿದ್ದು, ಸದರಿ ಬಾಕಿ ಹಣ ಪಾವತಿಸಲು ಸಹಾಯಕವಾಗಲು ಕಾರ್ಖಾನೆಗಳು ರಫ್ತು ಮಾಡುವ ಪ್ರತಿ ಮೆಟ್ರಿಕ್ ಟನ್ ಸಕ್ಕರೆಗೆ ರೂ.1,000/-ಗಳಂತೆ ರಫ್ತು ಸಹಾಯಧನವನ್ನು ನೀಡಲು ಹಾಗೂ ಈ ರಫ್ತು ಸಹಾಯಧನ ಮೊತ್ತವನ್ನು ರೂ.20.00 ಕೋಟಿಗಳಿಗೆ ಮಿತಿಗೊಳಿಸಿ ಕೆಲವು ಷರತ್ತುಗಳನ್ನು ವಿಧಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿರುವ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳು ಸರ್ಕಾರದ ಆದೇಶ ಹೊರಡಿಸಿದ ದಿನಾಂಕ 10.09.2003 ರಿಂದ 31.03.2004ರ ಅವಧಿಯಲ್ಲಿ ಸಕ್ಕರೆ ರಫ್ತು ಮಾಡಿರುವುದಾಗಿ ಈ ಸಂಬಂಧ ಕಾರ್ಖಾನೆಗಳು ಒದಗಿಸಿರುವ ರಫ್ತು ದಾಖಲೆಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಈ ಕಾರ್ಖಾನೆಗಳಿಗೆ ರಫ್ತು ಸಹಾಯಧನವನ್ನು ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

(ಲಕ್ಷ ರೂ.ಗಳಲ್ಲಿ)

| ಕ್ರ. ಸ | ಕಾರ್ಖಾನೆಯ ಹೆಸರು | ಕಬ್ಬು ಬೆಲೆ ಬಾಕಿ ಹಣ | ಪ್ರಸ್ತಾಪಿಸಿರುವ ಹಣ | ಆದೇಶದ ಪ್ರಕಾರ ಅರ್ಹತೆ ಇರುವ ಮೊತ್ತ |
|---|---|---|---|---|
| 1. | ಗೋದಾವರಿ ಶುಗರ್ಸ್ ಸಮೀರವಾಡಿ, ಬಾಗಲಕೋಟೆ ಜಿಲ್ಲೆ | 927.00 | 98.62 | 98.62 |
| 2. | ಜಮಖಂಡಿ ಶುಗರ್ಸ್ ಹಿರೇಪಡಸಲಗಿ, ಬಾಗಲಕೋಟೆ ಜಿಲ್ಲೆ | 928.00 | 73.53 | 73.53 |
| 3. | ಜೆಮ್ ಶುಗರ್ಸ್ (ಲಿ) ಕುಂದರಗಿ, ಬೀಳಗಿ ತಾ. ಬಾಗಲಕೋಟೆ ಜಿಲ್ಲೆ | 451.00 | 133.30 | 101.55 |
| 4. | ಶ್ರೀ ಚಾಮುಂಡೇಶ್ವರಿ ಶುಗರ್ಸ್ ಕೆ.ಎಂ.ದೊಡ್ಡಿ, ಮದ್ದೂರು ತಾ, ಮಂಡ್ಯ ಜಿಲ್ಲೆ | 3316.00 | 77.50 | 77.50 |
| 5. | ಉಗಾರ್ಸ್ ಶುಗರ್ಸ (ಲಿ) ಉಗಾರ್ ಖುರ್ದ್ ಬೆಳಗಾಂ ಜಿಲ್ಲೆ | 11.00 | 67.68 | 11.00 |
| 6. | ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಖಾನಾಪುರ, ಬೆಳಗಾಂ ಜಿಲ್ಲೆ | 1417.00 | 46.60 | 46.60 |
| | | **7050.00** | **497.23** | **408.80** |

ಆಯುಕ್ತರು, ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ: ಸಿಐ 231 ಎಸ್‌ಜಿಎಫ್ 03 (1) ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2004**

ಮೆ: ಜಮಖಂಡಿ ಸಕ್ಕರೆ ಕಾರ್ಖಾನೆ (ನಿ), ಹಿರೇಪಡಸಲಗಿ, ಬಾಗಲಕೋಟೆ ಜಿಲ್ಲೆ ಈ ಕಾರ್ಖಾನೆಯು ದಿನಾಂಕ 10.09.2003 ರಿಂದ 31.03.2004ರ ಅವಧಿಯಲ್ಲಿ ದಿನಾಂಕ 10.09.2003ರ ಸರ್ಕಾರದ ಆದೇಶದನುಸಾರ ಸಕ್ಕರೆ ರಫ್ತು ಮಾಡಿದ್ದು, ರಫ್ತು ಮಾಡಿದ ಸಕ್ಕರೆಗೆ 73.53 ಲಕ್ಷ ರೂ.ಗಳ ರಫ್ತು ಸಹಾಯಧನವನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2004-05ನೇ ಸಾಲಿನ ಅನುದಾನದಲ್ಲಿ ಯಾವುದೇ ಹಣವನ್ನು ಈ ಯೋಜನೆಗೆ ನಿಗಧಿಪಡಿಸಿಲ್ಲದ ಕಾರಣ ಈ ಹಣವನ್ನು ಸಾದಿಲ್ವಾರು ಲೆಕ್ಕ ಶೀರ್ಷಿಕೆ "8000-00-273-0-00-ಕೈಗಾರಿಕೆಗಳು" ಅಡಿಯಲ್ಲಿ ಮೊದಲಿಗೆ ಬಿಡುಗಡೆ ಮಾಡಿ ನಂತರ ಈ ಹಣವನ್ನು ಲೆಕ್ಕ ಶೀರ್ಷಿಕೆ 2852-08-0-201-0-06-106 (ಎನ್‌ಪಿ) ಸಹಾಯಧನ ಪೂರಕವೆಚ್ಚ 2004-05 (2ನೇ ಕಂತು) ಅಡಿಯಲ್ಲಿ ಮರು ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು.

ಸಾದಿಲ್ವಾರು ನಿಧಿಯಿಂದ ಹಣ ಬಿಡುಗಡೆಗೆ ಆದೇಶವನ್ನು ಆರ್ಥಿಕ ಇಲಾಖೆಯು ಪ್ರತ್ಯೇಕವಾಗಿ ಹೊರಡಿಸಲಿದೆ. ಆರ್ಥಿಕ ಇಲಾಖೆಯ ಆದೇಶವಿಲ್ಲದೇ ಯಾವುದೇ ಹಣವನ್ನು ಪಡೆಯಲು ಈ ಆದೇಶದಡಿ ಅವಕಾಶವಿರುವುದಿಲ್ಲ. ಹಣ ಸೆಳೆಯುವ ಅಧಿಕಾರಿಯು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರುರವರು ಆಗಿದ್ದು ಸದರಿ ಅಧಿಕಾರಿಯು ಆರ್ಥಿಕ ಇಲಾಖೆ ಹೊರಡಿಸುವ ಆದೇಶದೊಂದಿಗೆ ಹಣ ಸೆಳೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸಬೇಕು. ಆರ್ಥಿಕ ಇಲಾಖೆಯು ಪ್ರತ್ಯೇಕ ಆದೇಶ ಹೊರಡಿಸಿದ ನಂತರವೇ ಹಾಗೂ ಆದೇಶದ ಪ್ರತಿಯನ್ನು ಈ ಆದೇಶದೊಂದಿಗೆ ಲಗತ್ತಿಸಿ ಸಲ್ಲಿಸಿದ ನಂತರವೇ ಹಣ ಬಿಡುಗಡೆಗೆ ಖಜಾನೆಯು ಕ್ರಮವಹಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 1710 ಇಎಕ್ಸ್‌ಪಿ:1:2004 ದಿನಾಂಕ 29.11.2004ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಐಡಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1408

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಮೃಜರಾ ಪವರ್ ಪ್ಲಾಂಟ್ ಕಂಪೆನಿಗೆ, ಹಂಚಿಕೆಯಾಗಿರುವ 0.25 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು 0.5 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ : ಇಂಇ 311 ಎನ್‌ಸಿಇ 2002, ದಿನಾಂಕ : 30.4.2003.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಮೃಜರಾ/2004/2098, ದಿನಾಂಕ: 17/22.11.2004.

**ಪ್ರಸ್ತಾವನೆ:–**

ಮೆಸರ್ಸ್ ಮೃಜರಾ ಪವರ್ ಪ್ಲಾಂಟ್ ಕಂಪೆನಿಗೆ, ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಶಿವಮೊಗ್ಗ ಜಿಲ್ಲೆಯ, ಭದ್ರಾವತಿ ತಾಲ್ಲೂಕಿನ ಅಗರದಹಳ್ಳಿ ಬಳಿ ಅನ್ವೇರಿ ಬ್ರಾಂಚ್ ಕೆನಾಲ್ ಹಳ್ಳಕ್ಕೆ ಅಡ್ಡಲಾಗಿ 0.25 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಸ್ಥಳದಲ್ಲಿ ವಿವರವಾದ ಸರ್ವೇಕ್ಷಣೆಯ ನಂತರ 300 ಕ್ಯೂಸೆಕ್ಸ್ ನೀರನ್ನು 140 ದಿನಗಳಿಗೆ ಮತ್ತು 150 ಕ್ಯೂಸೆಕ್ಸ್ ನೀರನ್ನು 285 ದಿನಗಳಿಗೆ ಉಪಯೋಗಿಸಿಕೊಂಡು 0.25 ಮೆಗಾ ವ್ಯಾಟ್ ಸಾಮರ್ಥ್ಯದ ಬದಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ವಿದ್ಯುತ್‌ನ್ನು ಉತ್ಪಾದಿಸಬಹುದೆಂದು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 405 ಎನ್‌ಸಿಇ 2004, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೆಸರ್ಸ್ ಮೃಜರಾ ಪವರ್ ಪ್ಲಾಂಟ್ ಕಂಪೆನಿಗೆ, ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಶಿವಮೊಗ್ಗ ಜಿಲ್ಲೆಯ, ಭದ್ರಾವತಿ ತಾಲ್ಲೂಕಿನ ಅಗರದಹಳ್ಳಿ ಬಳಿ ಅನ್ವೇರಿ ಬ್ರಾಂಚ್ ಕೆನಾಲ್ ಹಳ್ಳಕ್ಕೆ ಅಡ್ಡಲಾಗಿ ಹಂಚಿಕೆ ಮಾಡಲಾದ 0.25 ಮೆಗಾ ವ್ಯಾಟ್ ಸಾಮರ್ಥ್ಯದ ಮೃಜರಾ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 0.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು, ಹಂಚಿಕೆ ಆದೇಶದ ನಿಬಂಧನೆಗಳಿಗೊಳಪಟ್ಟು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1435

**ವಿಷಯ:** ಮೆಸರ್ಸ್ ಬೋನಾಲ್ ಹೈಡ್ರೋ ಎಲೆಕ್ಟ್ರಿಕ್ ಕಂಪೆನಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, 2.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಡಿಇ 48 ಎನ್‌ಸಿಇ 98, ದಿನಾಂಕ : 11.11.1998.
2. ಸರ್ಕಾರಿ ಆದೇಶ ಸಂಖ್ಯೆ : ಡಿಇ 63 ಎನ್‌ಸಿಇ 2002, ದಿನಾಂಕ : 18.4.2002.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಬೋನಾಲ್ / 2004 / 2223, ದಿನಾಂಕ : 7.12.2004.

**ಪ್ರಸ್ತಾವನೆ:–**

ಮೆಸರ್ಸ್ ಬೋನಾಲ್ ಹೈಡ್ರೋ ಎಲೆಕ್ಟ್ರಿಕ್ ಕಂಪೆನಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕಿನ ಬೋನಾಲ್ ಗ್ರಾಮದ ಬೋನಾಲ್ ಟ್ಯಾಂಕ್‌ನ ಬಳಿ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಬೋನಾಲ್ ಟ್ಯಾಂಕ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಯೋಜನೆಗಾಗಿ ಕಾಲಾವಕಾಶವನ್ನು ದಿನಾಂಕ : 18.4.2005 ರವರೆಗೆ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ವಿಸ್ತರಿಸಲಾಗಿತ್ತು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸದರಿ ಕಂಪೆನಿಗೆ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 18.4.2006ರವರೆಗೆ ವಿಸ್ತರಿಸುವಂತೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 362 ಎನ್‌ಸಿಇ 2004, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೆಸರ್ಸ್ ಬೋನಾಲ್ ಹೈಡ್ರೋ ಎಲೆಕ್ಟ್ರಿಕ್ ಕಂಪೆನಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕಿನ ಬೋನಾಲ್ ಗ್ರಾಮದ ಬೋನಾಲ್ ಟ್ಯಾಂಕ್‌ನ ಬಳಿ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಬೋನಾಲ್ ಟ್ಯಾಂಕ್ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ : 18.4.2005 ರಿಂದ 18.4.2006 ರವರೆಗೆ ವಿಸ್ತರಿಸಲಾಗಿದೆ.

4. ಮೇಲೆ ಓದಲಾದ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1439

**ವಿಷಯ:** ಸಾಗರ್ ಪವರ (ನೀರುಕಟ್ಟೆ) ಪ್ರೈವೇಟ್ ಲಿಮಿಟೆಡ್ ಕಂಪೆನಿಯ 15 ಮೆಗಾ ವ್ಯಾಟ್ ಸಾಮರ್ಥ್ಯದ ನೀರು ಕಟ್ಟೆ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 12 ಮೆಗಾ ವ್ಯಾಟ್‌ಗೆ ಕಡಿಮೆಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಡಿಇ 42 ಎನ್‌ಸಿಇ 98, ದಿನಾಂಕ : 11.11.1998.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ನೀರುಕಟ್ಟೆ / 2004 / 2126, ದಿನಾಂಕ : 27.11.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಸಾಗರ್ ಪವರ್ ಲಿಮಿಟೆಡ್ (ಈಗಿನ ಹೆಸರು ಮೆಸರ್ಸ್ ಸಾಗರ್ ಪವರ (ನೀರುಕಟ್ಟೆ) ಪ್ರೈವೇಟ್ ಲಿಮಿಟೆಡ್) ಕಂಪೆನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ನೀರುಕಟ್ಟೆ ಗ್ರಾಮದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ 15 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಸ್ಥಳವನ್ನು ಸರ್ವೇಕ್ಷಣೆ ಮಾಡಿದ ಮೇಲೆ ಈ ಯೋಜನೆಯನ್ನು 15 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಅನುಷ್ಠಾನಗೊಳಿಸಿದ್ದಲ್ಲಿ ಶೇಖರಣೆಯಾಗುವ ನೀರಿನಿಂದ ಸ್ಥಳೀಯ ಜಮೀನುಗಳು ಮುಳುಗಡೆ ಆಗುವ ಸಾಧ್ಯತೆ ಇದೆ. ಆದ್ದರಿಂದ, ಈ ಯೋಜನೆಯನ್ನು 12 ಮೆಗಾ ವ್ಯಾಟ್‌ಗೆ ಸೀಮಿತಗೊಳಿಸಿ ಅನುಷ್ಠಾನ ಮಾಡಿದ್ದಲ್ಲಿ ಸ್ಥಳೀಯರಿಗೆ ಯಾವುದೇ ತೊಂದರೆಯಾಗುವುದಿಲ್ಲ ಎಂದು ತಿಳಿಸಿ ಸಾಮರ್ಥ್ಯವನ್ನು 15 ಮೆಗಾ ವ್ಯಾಟ್‌ನಿಂದ 12 ಮೆಗಾ ವ್ಯಾಟ್‌ಗೆ ತಗ್ಗಿಸಿ ಪರಿಷ್ಕೃತ ಆದೇಶ ಹೊರಡಿಸುವಂತೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ' ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 403 ಎನ್‌ಸಿಇ 2004, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೆಸರ್ಸ್ ಸಾಗರ್ ಪವರ್ (ನೀರುಕಟ್ಟೆ) ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಮೇಲೆ (1)ರ ಆದೇಶದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ನೀರುಕಟ್ಟೆ ಗ್ರಾಮದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 15 ಮೆಗಾ ವ್ಯಾಟ್ ಸಾಮರ್ಥ್ಯದ ನೀರುಕಟ್ಟೆ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 12 ಮೆಗಾ ವ್ಯಾಟ್‌ಗೆ ಮೊಟಕುಗೊಳಿಸಿ / ತಗ್ಗಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

4. ಮೇಲೆ ಓದಲಾದ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1437

**ವಿಷಯ:** ಮೆಸರ್ಸ್ ಮುರುಡೇಶ್ವರ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪೆನಿಗೆ, 18 ಮೆಗಾ ವ್ಯಾಟ್ ಸಾಮರ್ಥ್ಯದ ದಾಂಡೇಲಿ ಕಿರುಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಡಿಇ 96 ಎನ್‌ಸಿಇ 2000, ದಿನಾಂಕ : 10.7.2000.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ : ಇಂಇ 279 ಎನ್‌ಸಿಇ 2004, ದಿನಾಂಕ : 13.10.2004.
3. ಕಂಪೆನಿಯ ಸಮಜಾಯಿಷಿ ಪತ್ರ ದಿನಾಂಕ : 21.10.2004 ಮತ್ತು 30.11.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಮುರುಡೇಶ್ವರ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪೆನಿಗೆ ಉತ್ತರ ಕನ್ನಡ ಜಿಲ್ಲೆಯ ದಾಂಡೇಲಿಯಲ್ಲಿ 18 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಮೇಲೆ (2) ರ ನೋಟೀಸ್‌ನಲ್ಲಿ ಕಂಪೆನಿಯು ಯೋಜನಾನುಷ್ಠಾನದ ನಿಟ್ಟಿನಲ್ಲಿ ಯಾವುದೇ ಅಭಿವೃದ್ಧಿ ಸಾಧಿಸಿಲ್ಲವಾದುದರಿಂದ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದು ಎಂಬ ಬಗ್ಗೆ ಕಾರಣ ಕೇಳಲಾಗಿತ್ತು.

3. ಮೇಲೆ (3)ರಲ್ಲಿ ಓದಲಾದ ಪತ್ರಗಳಲ್ಲಿ ಕಂಪೆನಿಯು ರಾಜ್ಯ ಹಾಗೂ ಕೇಂದ್ರ ಸರ್ಕಾರದಿಂದ ಪರಿಸರ ಅನುಮೋದನೆ ಪಡೆಯಬೇಕೆಂಬ ಸಮಜಾಯಿಷಿ ನೀಡಿ ಯೋಜನಾನುಷ್ಠಾನಕ್ಕಾಗಿ ಕಾಲಾವಕಾಶ ನೀಡಲು ಕೋರಿದ್ದಾರೆ.

4. ಕಂಪೆನಿಯ ಸಮಜಾಯಿಷಿ ಉತ್ತರವನ್ನು ಸರ್ಕಾರವು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 371 ಎನ್‌ಸಿಇ 2004, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2004**

5. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಮೆಸರ್ಸ್ ಮುರುಡೇಶ್ವರ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪೆನಿಗೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಉತ್ತರ ಕನ್ನಡ ಜಿಲ್ಲೆಯ ದಾಂಡೇಲಿಯಲ್ಲಿ ಹಂಚಿಕೆ ಮಾಡಲಾದ (9 ಮೆಗಾ ವ್ಯಾಟ್ x 2 = 18 ಮೆಗಾ ವ್ಯಾಟ್) ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ವಿಸ್ತರಿಸಲಾಗಿದೆ.

6. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1442

**ವಿಷಯ:** ಮೆಸರ್ಸ್ ರಿವರ್ ವ್ಯೂ ಕೋ ಅಪರೇಟಿವ್ ರೆಸಾರ್ಟ್ಸ್ ಲಿಮಿಟೆಡ್‌ಗೆ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಕೂಡ್ಲುತೀರ್ಥ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಇಂಇ 261 ಎನ್‌ಸಿಇ 2002 (ಭಾಗ), ದಿನಾಂಕ : 16.2.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ / 06 / ಕೂಡ್ಲುತೀರ್ಥ / 2004 / 2128, ದಿನಾಂಕ : 27.11.2004.

**ಪ್ರಸ್ತಾವನೆ:–**

ಮೆಸರ್ಸ್ ರಿವರ್‌ವ್ಯೂ ಕೋ ಅಪರೇಟಿವ್ ರೆಸಾರ್ಟ್ಸ್ ಲಿಮಿಟೆಡ್ ಕಂಪೆನಿಗೆ, ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಉಡುಪಿ ಜಿಲ್ಲೆಯ, ಕಾರ್ಕಳ ತಾಲ್ಲೂಕಿನ ನಡಪಲ್ ಗ್ರಾಮದ ಕೂಡ್ಲುತೀರ್ಥ ನದಿಗೆ ಅಡ್ಡಲಾಗಿ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಸ್ಥಳದಲ್ಲಿ ನೀರಿನ ಹರಿವು 2 ಕ್ಯೂಮೆಕ್ಸ್ ಇರುವುದರಿಂದ ಸಾಮರ್ಥ್ಯವನ್ನು 2.5 ಮೆಗಾ ವ್ಯಾಟ್‌ನಿಂದ 3 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 412 ಎನ್‌ಸಿಇ 2004, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಮೆಸರ್ಸ್ ರಿವರ್‌ವ್ಯೂ ಕೋ ಅಪರೇಟಿವ್ ರೆಸಾರ್ಟ್ಸ್ ಲಿಮಿಟೆಡ್ ಕಂಪೆನಿಗೆ, ಮೇಲೆ (1) ರ ಆದೇಶದಲ್ಲಿ ಉಡುಪಿ ಜಿಲ್ಲೆಯ, ಕಾರ್ಕಳ ತಾಲ್ಲೂಕಿನ ನಡಪಲ್ ಗ್ರಾಮದ ಕೂಡ್ಲುತೀರ್ಥ ನದಿಗೆ ಅಡ್ಡಲಾಗಿ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಈ ಕೆಳಗಿನ ಷರತ್ತುಗಳೊಂದಿಗೆ 3 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು, ಅನುಮತಿ ನೀಡಲಾಗಿದೆ.

1. ಯೋಜನೆಗೆ ಬೇಕಾದ ನೀರನ್ನು ಬಹುದೂರ ತೆಗೆದುಕೊಂಡು ಹೋಗುವುದರಿಂದ ಕೆಳತೊರೆಯಲ್ಲಿ ನೀರಿನ ಅಭಾವವಾಗಬಹುದು. ಆದುದರಿಂದ ಯೋಜನೆಯ ಅಣೆಕಟ್ಟು ಹಾಗೂ ಒಡ್ಡುಗಳ ಕೆಳತೊರೆಯಲ್ಲಿ ಈ ಯೋಜನೆಯಿಂದ ನೀರಿನ ಅಭಾವವಾಗಕೂಡದು.
2. ಸ್ಥಳೀಯ ಕ್ಷೇತ್ರದಲ್ಲಿ ಈ ಯೋಜನೆಯಿಂದ ಯಾವುದೇ ಅನಾನುಕೂಲತೆಗಳು ಆಗಕೂಡದು.
3. ಈ ಯೋಜನೆಯ ಡಿ.ಪಿ.ಆರ್.ಗೆ ಮೇಲಿನ ಕುರಿತಾಗಿ ಜಲಸಂಪನ್ಮೂಲ ಅರಣ್ಯ ಇಲ್ಲವೇ ಸಂಬಂಧಿತ ಇಲಾಖೆಗಳಿಂದ ಅನುಮೋದನೆ ಪಡೆಯಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1436

**ವಿಷಯ:** ಮೆಸರ್ಸ್ ರಿವರ್ ವ್ಯೂ ಕೋ ಅಪರೇಟಿವ್ ರೆಸಾರ್ಟ್ಸ್ ಲಿಮಿಟೆಡ್‌ಗೆ 6 ಮೆಗಾ ವ್ಯಾಟ್ ಸಾಮರ್ಥ್ಯದ ಮರ್ಕಳ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 18 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಇಂಇ 261 ಎನ್‌ಸಿಇ 2003, ದಿನಾಂಕ : 16.2.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ / 06 / ಮರ್ಕಳ / 2004 / 2127, ದಿನಾಂಕ : 27.11.2004.

**ಪ್ರಸ್ತಾವನೆ:**

ಮೆಸರ್ಸ್ ರಿವರ್‌ವ್ಯೂ ಕೋ ಅಪರೇಟಿವ್ ರೆಸಾರ್ಟ್ಸ್ ಲಿಮಿಟೆಡ್ ಕಂಪೆನಿಗೆ, ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಉಡುಪಿ ಜಿಲ್ಲೆಯ, ಕಾರ್ಕಳ ತಾಲ್ಲೂಕಿನ ನಡಪಲ್ ಗ್ರಾಮದ ಬಳಿ ಮರ್ಕಳ ಹೊಳೆಗೆ ಅಡ್ಡಲಾಗಿ 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಸ್ಥಳದಲ್ಲಿ ನೀರಿನ ಹರಿವು 6.5 ಕ್ಯೂಮೆಕ್ಸ್‌ನಿಂದ 7 ಕ್ಯೂಮೆಕ್ಸ್ ಮತ್ತು ಎತ್ತರ 150 ಮೀಟರ್‌ನಿಂದ 452.5 ಮೀಟರ್ ಇರುವುದರಿಂದ ವಿದ್ಯುತ್ ಉತ್ಪಾದನಾ ಸಾಮರ್ಥ್ಯವನ್ನು 6 ಮೆಗಾ ವ್ಯಾಟ್‌ನಿಂದ 18 ಮೆಗಾ ವ್ಯಾಟ್‌ಗೆ ಹೆಚ್ಚಿಸಬಹುದೆಂದು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 413 ಎನ್‌ಸಿಇ 2004, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಮೆಸರ್ಸ್ ರಿವರ್‌ವ್ಯೂ ಕೋ ಅಪರೇಟಿವ್ ರೆಸಾರ್ಟ್ಸ್ ಲಿಮಿಟೆಡ್ ಕಂಪೆನಿಗೆ, ಮೇಲೆ (1) ರ ಆದೇಶದಲ್ಲಿ ಉಡುಪಿ ಜಿಲ್ಲೆಯ, ಕಾರ್ಕಳ ತಾಲ್ಲೂಕಿನ ನಡಪಲ್ ಗ್ರಾಮದ ಬಳಿ ಮರ್ಕಳ ಹೊಳೆಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಈ ಕೆಳಗಿನ ಷರತ್ತುಗಳೊಂದಿಗೆ 18 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು, ಅನುಮತಿ ನೀಡಲಾಗಿದೆ.

1. ಯೋಜನೆಗೆ ಬೇಕಾದ ನೀರನ್ನು ಬಹುದೂರ ತೆಗೆದುಕೊಂಡು ಹೋಗುವುದರಿಂದ ಕೆಳತೊರೆಯಲ್ಲಿ ನೀರಿನ ಅಭಾವವಾಗಬಹುದು. ಆದುದರಿಂದ ಯೋಜನೆಯ ಅಣೆಕಟ್ಟು ಹಾಗೂ ಒಡ್ಡುಗಳ ಕೆಳತೊರೆಯಲ್ಲಿ ಈ ಯೋಜನೆಯಿಂದ ನೀರಿನ ಅಭಾವವಾಗಕೂಡದು.
2. ಸ್ಥಳೀಯ ಕ್ಷೇತ್ರದಲ್ಲಿ ಈ ಯೋಜನೆಯಿಂದ ಯಾವುದೇ ಅನಾನುಕೂಲತೆಗಳು ಆಗಕೂಡದು.
3. ಈ ಯೋಜನೆಯ ಕೆಲಸ ಪ್ರಾರಂಭಿಸುವ ಮುನ್ನ ಡಿ.ಪಿ.ಆರ್.ಗೆ ಮೇಲಿನ ಕುರಿತಾಗಿ ಜಲಸಂಪನ್ಮೂಲ ಅರಣ್ಯ ಇಲಾಖೆ ಹಾಗೂ ಸಂಬಂಧಿತ ಇಲಾಖೆಗಳಿಂದ ಅನುಮೋದನೆ ಪಡೆಯಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1441

**ENERGY SECRETARIAT**

**Subject:** Cancellation of permission given to M/s. A. Prabhakar Reddy & Co., Hyderabad to set up 5 MW Mini hydel power project at Narayanapura Dam near Rodalbanda in Raichur District.

**Read:**
1. G.O. No: DE125 NCE96 (14) dated 10.6.1997.
2. Letter No: K.R.E.D. / 06/ Rodalabanda / 2004 / 1902, dated 26.10.2004 of the Managing Director,Karnataka Renewable Energy Development Ltd., Bangalore.
3. Show-cause Notice No.EN369 NCA 2004, dated 17.11.2004.

**PREAMBLE:**

The Government of Karnataka in its order dated: 10.6.1997 cited (1) above have accorded permission to M/s. A. Prabhakar Reddy & Co., Hyderabad to set up 5 MW Mini hydel power project at Narayanapura Dam near Rodalbanda in Raichur District.

2. The Managing Director, Karnataka Renewable Energy Development Ltd., in his letter dated 26.10.2004 cited (2) above has recommended for cancellation of the permission given in the Government Order dated: 10.6.1997 on the ground that the developer has not shown any progress and has therefore recommended for cancellation of the permission given after issue of notice.

3. Accordingly, the recommendation of the Managing Director, KREDL was examined.

4. M/s. A. Prabhakar Reddy & Company, Hyderbad, was issued a Show-cause notice by the Government on 17.11.2004 cited (3) above, as to why the permission in the Government Order dated 10.6.1997 to set Mini hydel project, should not be cancelled for not showing progress in the implementation of the project.

5. M/s. A. Prabhakar Reddy & Company, has not responded to the Show-cause notice dated 17.11.2004 cited (3) above.

6. Hence, the order

**Government Order No: EN 369 NCE 2004, Bangalore, dated: 8th December 2004**

In the circumstance explained above, Government are hereby cancel the permission given to M/s. A. Prabhakar Reddy & Co., Hyderabad to set up a 5 MW Mini hydel power project at Narayanapura Dam near Rodalbanda in Raichur District in the Government Order No DE125 NCE97 (14) dated 10.6.1997, with immediate effect.

By Order and in the Name of the Governor of Karnataka,
**K.L. JAYARAM**
Under Secretary to Government, Energy Department.

P.R. 1438

**ಕಂದಾಯ ಸಚಿವಾಲಯ**

**ವಿಷಯ:** ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರನ್ವಯ ಇಲಾಖೆಯ ಕರ್ತವ್ಯ ನಿರ್ವಹಿಸಲು ಕಂದಾಯ ಇಲಾಖೆಯ ಉಪ ವಿಭಾಗಾಧಿಕಾರಿಗಳು ಹಾಗೂ ಕಂದಾಯ ನಿರೀಕ್ಷಕರುಗಳಿಗೆ ಅಧಿಕಾರ ನೀಡುವ ಕುರಿತು.

**ಓದಲಾಗಿದೆ:** 1. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ.ಸಿಬ್ಬಂದಿ/(1)/ಸಿಆರ್/139/2002-2003, ದಿ:05/04/2003.

**ಪ್ರಸ್ತಾವನೆ:-**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ಮತ್ತು ನಿಯಮಗಳು 2002ನ್ನು ದಿ:01/05/2003ರಿಂದ ಜಾರಿಗೆ ತರಲಾಗಿರುತ್ತದೆ. ಸದರಿ ಅಧಿನಿಯಮ 1997ರನ್ವಯ ಧಾರ್ಮಿಕ ದತ್ತಿ ಇಲಾಖೆಯ ಆಡಳಿತವನ್ನು ನಿರ್ವಹಿಸಲು ರಾಜ್ಯದ ಜಿಲ್ಲಾಧಿಕಾರಿಗಳ ಕಛೇರಿಯು ಸೇರಿದಂತೆ ಧಾರ್ಮಿಕ ದತ್ತಿ ಇಲಾಖೆಯ ಕಛೇರಿಗಳಿಗೆ ಇನ್ನು ಹೆಚ್ಚಿನ ಸಿಬ್ಬಂದಿಯ ಅವಶ್ಯಕತೆ ಇರುತ್ತದೆ. ಆದರೆ ರಾಜ್ಯದಲ್ಲಿ ಪ್ರಸ್ತುತ ಜಾರಿಯಲ್ಲಿರುವ ಆರ್ಥಿಕ ಮಿತವ್ಯಯದ ಹಿನ್ನಲೆಯಲ್ಲಿ ಹೊಸ ಹುದ್ದೆಗಳ ಸೃಜನೆಗೆ ನಿರ್ಬಂಧ ಇರುತ್ತದೆ.

ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ದಕ್ಷಿಣ ಕನ್ನಡ , ಉಡುಪಿ, ಬಳ್ಳಾರಿ, ಬೆಳಗಾಂ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿನ ಸಹಾಯಕ ಆಯುಕ್ತರು ಮತ್ತು ತಾಲ್ಲೂಕು ಮುಜರಾಯಿ ಪರಿವೀಕ್ಷಕರುಗಳು ನಿರ್ವಹಿಸುವ ಕರ್ತವ್ಯಗಳನ್ನು ಧಾರ್ಮಿಕ ದತ್ತಿ ಇಲಾಖೆಯ ಸಿಬ್ಬಂದಿಯಿಂದಲೇ ನಿರ್ವಹಿಸಲು ಉದ್ದೇಶಿಸಲಾಗಿದೆ. ಉಳಿದಂತೆ ರಾಜ್ಯದ ಇನ್ನಿತರ 20 ಜಿಲ್ಲೆಗಳಲ್ಲಿ ಸಹಾಯಕ ಆಯುಕ್ತರು, ಮುಜರಾಯಿ ರವರ ಕಛೇರಿ ಕೆಲಸ ನಿರ್ವಹಿಸಲು ಆಯಾ ಜಿಲ್ಲೆಯ ಉಪ ವಿಭಾಗಾಧಿಕಾರಿಗಳನ್ನು ಆಯಾಯಾ ಉಪ ವಿಭಾಗದ ವ್ಯಾಪ್ತಿಯಲ್ಲಿ ಬರುವ ಧಾರ್ಮಿಕ ದತ್ತಿ ಇಲಾಖೆಯ ಕರ್ತವ್ಯವನ್ನು ನಿರ್ವಹಿಸಲು ಹಾಗೂ ಸಂಬಂಧಪಟ್ಟ ಉಪ ವಿಭಾಗದ ತಾಲ್ಲೂಕು ಮುಜರಾಯಿ ಪರಿವೀಕ್ಷಕರುಗಳ ಕರ್ತವ್ಯವನ್ನು ಆಯಾಯಾ ಹೋಬಳಿ ಕಂದಾಯ ಪರಿವೀಕ್ಷಕರುಗಳು ನಿರ್ವಹಿಸಲು ಅನುವಾಗುವಂತೆ ಸರ್ಕಾರದಿಂದ ಆದೇಶ ಹೊರಡಿಸುವಂತೆ ಕೋರಿ ಮೇಲೆ ಓದಲಾದ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 57 ಮುಸೇವಿ 2001(ಭಾ), ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ಹಾಗೂ ನಿಯಮಗಳು 2002ರಡಿ ಧಾರ್ಮಿಕ ದತ್ತಿ ಇಲಾಖೆಯ ಆಡಳಿತವನ್ನು ಸುವ್ಯವಸ್ಥಿತವಾಗಿ ನಡೆಸಲು ಅನುವಾಗಲು ಧಾರ್ಮಿಕ ದತ್ತಿ ಇಲಾಖೆಗೆ ಸೇರಿದ ಸಹಾಯಕ ಆಯುಕ್ತರು ಹಾಗೂ ತಾಲ್ಲೂಕು ಮುಜರಾಯಿ ಪರಿವೀಕ್ಷಕರುಗಳು ಇಲ್ಲದೇ ಇರುವ ಕಡೆಗಳಲ್ಲಿ ಕಂದಾಯ ಉಪ ವಿಭಾಗದ ಸಹಾಯಕ ಆಯುಕ್ತರುಗಳು ಆಯಾ ಉಪ ವಿಭಾಗದ ಧಾರ್ಮಿಕ ದತ್ತಿ ಇಲಾಖೆಯ ಸಹಾಯಕ ಆಯುಕ್ತರು ನಿರ್ವಹಿಸುವ ಕರ್ತವ್ಯಗಳನ್ನು ನಿರ್ವಹಿಸಲು ಹಾಗೂ ತಾಲ್ಲೂಕು ಮುಜರಾಯಿ ಪರಿವೀಕ್ಷಕರುಗಳು ಇಲ್ಲದೇ ಇರುವ ಕಡೆ ತಾಲ್ಲೂಕು ಮುಜರಾಯಿ ಪರಿವೀಕ್ಷಕರುಗಳ ಕರ್ತವ್ಯವನ್ನು ಆಯಾಯ ಹೋಬಳಿ ಕಂದಾಯ ಪರಿವೀಕ್ಷಕರುಗಳು ನಿರ್ವಹಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 1420 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

**FOREST, ECOLOGY AND ENVIRONMENT SECRETARIAT**

**Subject:** Renewal of mining in favour of M/S Bellary Mining Corporation over an area of 15.80 ha. of forest land in Halkundi Village, Bellary District.

**Read:**
1. Letter No.B1.MNG.CR.16/92-93,dt:30-6-1992 of the Principal Chief Conservator of Forests(Management), Bangalore.
2. Letter No.A5(B1)MNG.CR.16/92-93(BMC), dt:18/11/2000, 18.5.2001,8.3.2004 & 25.9.2004 of the Principal Chief Conservator of Forests, Bangalore.
3. State Government letter No.FEE 42 FFM 92, dt:20-03-1997, 13-8-2000, 20-12-2000, 18-10-2003,27-1-2004, 5-4-2004 and 1-10-2004.
4. Government of India, Ministry of Environment and Forests, Regional Office(South Zone), Bangalore letter No. F©/A/16.1. KAR/60 MIN, dated: 24.4.1992, 12.1.2000, 4.5.2000, 28.4.2003, 11.9.2003, 5.1.2004, 24.5.2004& 19.10.2004.

**PREAMBLE:**

The Chief Conservator of Forests(Management), Bangalore had sent proposal vide his letter dated 30.6.1992 read at (1) above for renewal of mining lease in favour of M/s Bellary Mining Corporation over an area of 15.80 ha of forest land in Halkundi village, Bellary District under section 2 of Forest(Conservation) Act, 1980 for a period of twenty years subject to certain conditions.

The proposal of Principal Chief Conservator of Forests was recommended to Government of India, Ministry of Environment and Forests, Regional office, Bangalore vide letter of even number dated: 20.3.1997 read at (3) above and its approval was sought under Section-2 of Forest(Conservation) Act,1980 for the renewal of mining lease in favour of M/s Bellary Mining Corporation over an area of 15.80 ha of forest land in Halkundi village, Bellary District.

The Government of India, Ministry of Environment and Forests, Regional office, Bangalore vide its letter dated 28-04-2003 and 5-1-2004 read at (4) above after considering all the facts of the proposal have accorded temporary working permission for six months with effect from 28-04-2003 and further extended for six months w.e.f 29-10-2003 subject to the conditions that no fresh area shall be broken up and all environmental safeguards shall be adhered to.

The Government of India, Ministry of Environment and Forests, Regional Office(South Zone),Bangalore vide its letter dated 24-4-92 and 12.1.2001 read at (4) above requested to furnish

certain additional information clarification and documents on certain points. The same had been obtained by the Principal Chief Conservator of Forests vide his letter dated 18.5.2001 read at (2) above and forward to Government of India vide State Government letter dated 20.12.2000.

The Government of India, Ministry of Environment and Forests, Regional Office(South Zone), Bangalore vide its letter dated 11.9.2003 read at (4) above after careful consideration of the proposal of the State Government have conveyed its in-principle (Stage-I) approval of 15.80 ha. of forest land in Halkundi Village,Bellary District in favour of M/s Bellary Mining Corporation subject to fulfillment of certain conditions.

In compliance of the stipulated conditions, the Principal Chief Conservator of Forests vide his letter dated 8.3.2004 read at (2) above has sent his report and the compliance report was forwarded to Government of India, Ministry of Environment and Forests, Regional Office, Bangalore vide State Government`s letter dated 1.10.2004 read at (2) above.

The Government of India, Ministry of Environment and Forests,Regional Office(South Zone), Bangalore vide its letter dated 19-10.2004 read at (4) above has conveyed its approval (Stage-II) for diversion of 15.80 ha. of forest land in Halkundi Village, Bellary District in favour of M/s Bellary Mining Corporation for a period of 10 years with effect from 28.4.2003 subject to certain conditions. Hence, this order.

**GOVERNMENT ORDER NO. FEE 42 FFM 92, BANGALORE, DATED: 22nd DECEMBER 2004**

After examining all aspects of the matter and inview of the approval accorded to the proposal by the Government of India, Ministry of Environment and Forests, Regional office, Bangalore, Government are pleased to accord its approval for diversion of 15.80 ha of forest land in Halkundi Village, Bellary District in favour of M/s Bellary Mining Corporation for a period of 10 years with effect from 28.4.2003 subject to the following conditions:-

1. Legal status of the forest land shall remain unchanged.
2. Demarcation of forest area proposed for the project shall be carried out on ground by erecting cement concrete pillars at an interval of 20 meters at the cost of the user agency.
3. The Compensatory Afforestation shall be raised over 2.00 ha. of identified non-forest land at Sy.No.382 of Machihally Village of Harappanahally taluk at the cost of user agency. The State Government shall obtain prior permission of Central Government for change of location and schedule of compensatory afforestation site, if any.
4. The non-forest land for compensatory afforestation shall be notified by the State Government as RF under section 4 or PF under section 29 of the Indian Forest Act,1927 or the State Forest Act within a period of 6 months and Nodal officer(Forest Conservation) shall report the compliance with in six months.
5. The penal compensatory afforestation shall be raised over 27.6 ha. of degraded forest land at the cost of the user agency.
6. The cost of fencing and regeneration of safety zone area and afforestation in lieu of safety zone area shall be recovered from user agency as per the guidelines issued under the Act.
7. The reclamation work in surrendered 243.20 ha. of forest area shall be taken up by the Forest Department at the cost of user agency within a period of three years positively.
8. The user agency shall deposit the Net Present Value(NPV) of the diverted forest land measuring 15.80 ha. with the State Forest Department as per the orders of the Hon`ble Supreme Court dated 30.10.2002 and 1.8.2003 in I.A. No.566 in W.P.© No.202/95 and the guidelines issued by the Ministry vide letter No. 5-1/1998-FC (Pt.II), dated 18.9.2003 and 22.9.2003 in this regard and Government Notification No. FEE 247 FGL 2002, dated; 17.1.04.
9. The State Government shall depost the funds with Compensatory Afforestation Fund Management and Planning Authority(CAMPA) which has already been constituted and notified by the Central Government on 23.4.2004.Till such time the CAMPA intimates the Head of Account for depositing of funds, the funds will be maintained in the form of fixed deposits in the name of Nodal officer or concerned Deputy Conservator of Forests by the State Government. The funds realized towards the NPV shall not be utilized by the State Government.
10. The Environmental clearance shall be obtained from Ministry of Environment and Forests as EIA notification dated 27.1.1994 if the production level increases from earlier lease period.
11. The mining activity in forest area shall be carried out as per the approved mining plan from the I.B.M.
12. The consent of State Pollution Control Board shall be obtained under Air and Water Act before commencement of mining operation and it shall be renewed every year.

13. Reclamation work concurrent to the mining shall be taken up by the user agency as far as possible.
14. The user agency shall maintain a Safety Zone already created over equivalent degraded forest land and will also maintain the plantation done over an area, one and half times in extent of the safety zone at the project cost.
15. The user agency will reclaim the area concurrent to mining at the project cost.
16. Trees shall be felled only when it becomes necessary and in the supervision of the State Forest Department.
17. No new construction activity shall be allowed on a forest land.
18. No labour camps shall be established on the forest land.
19. Sufficient firewood shall be provided by the User Agency to the labourers at the project cost after purchase from the State Forest Department/Forest Development Corporation.
20. The User Agency shall ensure that there should be no damage to the available wildlife.
21. The approval under the Under Forest (Conservation) Act,1980 is subject to clearance under the Environment(Protection)Act,1986, if applicable.
22. The lease period of 10 years shall be co-terminus with the current lease granted under MMRD Act,1957.
23. The forest land shall not be used for any purpose other than that specified in the proposal.
24. Inspector General of Forests and a member of FAC shall visit the site to look into the feasibility if any other condition like imposition of additional compensatory afforestation etc., is required.
25. Any other condition that the State Government as well as Chief Conservator of Forests(Central), Regional Office, Bangalore/Principal Chief Conservator of Forests, Bangalore may impose from time to time for the protection and improvement of flora and fauna in the forest area.
26. The lessee shall pay usual lease rent and supervision charges as prescribed by the Government from time to time.
27. The lessee shall deposit the amount at prevailing rate towards raising of compensatory afforestation if the Government of India, MOEF stipulates the same.
28. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.
29. The lessee shall undertake afforestation measures in the vacant area of the lease.
30. The lessee shall carry out soil and water conservation measures and other necessary measures as advised by the Forest Department.
31. The lessee shall undertake to protect rigidly the leased area and forest area surrounding the area up to one Km. from the leased area
32. The lessee shall not cut any trees without prior permission of the Forest Department and all produce of permitted fellings shall be handed over to Forest Department under cover of receipt.
33. The lessee shall abide by all the conditions prescribed by Government of India and Government of Karnataka.
34. The lessee shall execute an agreement with the Forest Department binding himself to abide by all usual conditions and terms as per orders of the Government as well as Principal Chief Conservator of Forests.
35. The lessee shall take-up the planting work on the static dumps during the advance mining operations.
36. In case of violation of agreement conditions Forest Department shall have right to suspend the mining activities.

By Order and in the Name of the Governor of Karnataka,

**S.R. VATSALA**

P.R. 1444

Under Secretary to Government,
Forest, Ecology and Environment Department.

**PUBLIC WORKS SECRETARIAT**

**Subject:** Bangalore Mysore Infrastructure Corridor Project - Constitution of Expert Committee – regarding.

**Read:** Government Order No. PWD 155 CRM 95/BMICP Review Committee/2004 dated 4.11.2004

**Preamble:**

The Government Order read above, constitution of Review Committee on Bangalore – Mysore Infrastructure Corridor Project was envisaged. It is found that the name of the Committee and the scope of the Committee require modification.

2. The Karnataka Government, in order to enhance the infrastructure facility in the State of Karnataka, has decided to enter into an agreement with private parties for this purpose. Accordingly, an agreement was entered into with M/s. Nandi Infrastructure Corridor Enterprises Limited (NICEL) on 3rd April 1997. As per the said Framework Agreement thus entered, the Government has taken several measures to support the Company in executing the project. This included acquisition of private lands and transfer of Government lands, giving various concessions and coordinating the project between various Government departments so that the project could be implemented without any delay.

3. Recently, some land owners, whose lands were notified for acquisition, have questioned the acquisition proceedings in Writ Petitions before the Hon'ble High Court of Karnataka. In addition, both the houses of the Legislature have debated the various aspects of the project and have expressed fear that the Project Company is exceeding the Framework Agreement and sought for Government's intervention.

4) The Hon'ble Chief Minister, while replying to the debate on the issue, has reaffirmed the support to the project and has assured that the Government would examine whether the Framework Agreement is being adhered to or not in the light of the debate in both Houses of Legislature.

5) In these circumstances, the Government proposes to constitute an Expert Committee comprising of Sri. K.C. Reddy, Adviser to the Minister for PWD & Energy as Chairman, Principal Secretary, Finance Department, Principal Secretary, PWD, Principal Secretary, Commerce & Industries Department, Principal Secretary, Urban Development Department, Principal Secretary, Revenue Department, Commissioner, BDA, Chief Executive Officer, KIADB as members and the Secretary to Government, PWD as the Convener of the Committee.

6) In pursuance of the decision above, and in suppression of the earlier order of 04.11.2004 the following modified Order is issued.

**G.O. No. PWD 155 CRM/95/BMICP Expert Committee/2004 dated: 17th December 2004**

The Government reaffirms the support to the project. The Government has decided to constitute an Expert Committee to study and advise on the issues as to whether more lands than necessary have been acquired for the project and other related issues. The persons who have been appointed as Chairman and members shall go into the details of lands acquired – Private lands and Government lands to be handed over / already handed over to the project and advice the Government in the matter. The Expert Committee shall recommend whether such lands are genuinely required for the Company having relevance to the road alignment. If there is any dispute regarding their essentiality for the project, the same shall be referred to the Expert Committee for its recommendation.

2. The constitution of the Committee shall however not result in any delay in implementation of the project and the matters referred to it may be disposed off on day-to-day basis. The Committee may co-opt members if necessary. It may also invite and hear the views of the Project Company whenever necessary. The recommendations of the Committee will be valid even if some members are not present for the meeting, with proper leave of absence from Chair.

3. The Committee shall submit periodical reports about its decisions for consideration/information of the Government. First such report shall be submitted within a month. Apart from deciding the need for specific land for the project, the Committee may recommend action on other issues concerning the project, as it may consider necessary. Such recommendations shall be considered by the competent authority.

**4. The terms of reference of the Committee will be as follows:-**

1. Examine the designs and technical reports including drawings in respect of the Corridor Project, Expressway including Elevated Road, Peripheral Road, Link Road and Townships.
2. Five townships were proposed in the Framework Agreement. Whether this has been adhered to as per the agreement.
3. The Committee should also assess whether more land has been acquired than necessary.
4. Examine the Framework Agreement of the BMICP and suggest modification if needed. It should also suggest changes in the Arbitration clauses where as per the present position; Arbitration is to be held in London or any other place mutually agreeable by the parties.
5. Whether human misery is caused by taking over agricultural lands under unathorised occupation, tenanted lands and revenue pockets, which have been built.
6. Whether the Company has taken the development of the Corridor as per the road alignment approved by the Technical Experts of the Government. Whether the lands have been notified as per the road alignment and whether the lands not connected with the alignment have been notified.
7. Whether the Company has raised the finances mortgaging the Government property.

**B.A. VIJAYA**

P.R. 1422 Under Secretary to Government, Public Works Department (EAP).

**INFRASTRUCTURE DEVELOPMENT SECRETARIAT**

**Subject:** Bangalore International Airport Project- Reappropriation and release of funds during 2004-05 for providing alternative connectivity after closure of existing roads passing through Airport Site - reg.

**Read:**
1. G.O. No. IDD 28 DIA 02 dated 31-03–03
2. G.O. No. IDD 28 DIA 02 dated 12-02–04
3. G.O. No. IDD 28 DIA 02 dated 28-10–04
4. G.O. No. FD 1485 EXP. 1/2004 dated 07-10–04

**Preamble:-**

In G.O dated 31-03-03 read at Sl.No.(1) above, sanction was accorded for providing alternate connectivity for the existing Major District Road (MDR) on the Bangalore International Airport site near Devanahalli along the alignment recommended by KRDCL and KSIIDC by upgrading the road to MDR standards initially and with provision for upgrading to State Highway standards. An amount of Rs.2.75 crores was released to KSIIDC for getting this work executed by KRDCL with stipulation for releasing the remaining amount only after fully utilizing this advance.

In G.O. dated 12-02-04 read at Sl.No.(2) Government had sanctioned the revised estimates i.e. Rs.6.32 crores for the land cost and Rs.4.44 crores as cost of road construction and 5% agency commission to KRDCL on the work component only, and further an amount of Rs.1.25 crores and Rs.7.30 crores were also released. However this amount could not be drawn by KSIIDC since the State Huzur Treasury did not accept the payees receipt presented by KSIIDC for Rs.7.55 crores, due to the change in the procedure for drawal of funds, on account of introduction of token system and countersignature of Secretariat Officers on the Payees Receipt.

The Finance Department in its note dated 7-10-04 read at Sl.No.(4) has agreed and sanctioned release of Rs.100 lakhs for the above scheme out of the available provision of Rs.274.00 lakhs under the head of account-"5465-01-190-2-05-211" with a balance of Rs.174.00 lakhs. As this amount is insufficient to meet the total cost of the project i.e. Rs.11.30 crores, further Finance Department has agreed for re-appropriation of Rs.548.00lakhs out of the Demand No.6 to be met out of the provisions under the head of account "5465-01-190-2-02-100" (Plan)-State Support to the Project – Financial Assistance/ Relief- Head of Account 5465-01-190-2-05 (Plan).Accordingly Finance Department had issued an order dated 7-10-04 read at Sl.No.(4) for re-appropriation of amount of Rs.548.00 lakhs as stated above.

In the Government Order dated 28-10-04 read at Sl.No.(3) Rs.100.00 lakhs was released to KSIIDC for the time being towards the above scheme which was agreed to by Finance Department vide its note dated 7-10-04.

In view of the above, since balance amount of Rs.174 lakhs and the re-appropriated amount of Rs.548.00 lakhs has to be released to KSIIDC. Hence this order.

**G .O . No . IDD 28 DIA 02, Bangalore dated: 22nd December 2004.**

After careful consideration, Government are pleased to sanction Rs.1,74,00,000-00 (Rupees One hundred seventy four lakhs only) towards the balance cost of project of providing alternate connectivity to BIAP due to closure of existing road passing through proposed International Airport site, under the head of account '5465-01-190-2-05-211 (Plan) and also additional amount of Rs.5,48,00,000 (Rupees five hundred and forty eight lakhs only) under the head of account "5465-01-190-2-02-100 BIAP State Support to the Project-Financial Assistance (Plan)" which has been re-appropriated to the head of account 5465-01-190-2-05-211 (Plan)" .

The Managing Director, KSIIDC, is authorized to draw the above amount i.e. Rs.7,22,00,000 lakhs (Rupees Seven hundred and twenty two lakhs only) on a payees receipt countersigned by the Under Secretary to Government, Infrastructure Development Department.

This order is issued in accordance with concurrence given by the Finance Department vide its U.O.Note No.FD 1485/Exp.1/2004, dated 7-10-04 and in-terms of G.O.No.FD 1485 Exp.I/04, dated 7-10-04.

By Order and in the Name of the Governor of Karnataka,

**T.B. RENUKA PRASAD**

Under Secretary to Government, Infrastructure Development Department.

P.R. 1426

**ಕಾರ್ಮಿಕ ಸಚಿವಾಲಯ**

**ವಿಷಯ:** ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯ ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) ಹುದ್ದೆಯನ್ನು ಕಾರ್ಖಾನೆಗಳ ಜಂಟಿ ನಿರ್ದೇಶಕರು (ವೈದ್ಯಕೀಯ) ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ.

**ಪ್ರಸ್ತಾವನೆ:**

ಅಧಿಸೂಚನೆ ಸಂಖ್ಯೆ: ಕಾಇ 77 ಕಾಬಾಸೇ 2003, ದಿನಾಂಕ: 8.12.2003ರ ಮೂಲಕ ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯ ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) ಹುದ್ದೆಗೆ "ಎಲ್ಲಾ ಉದ್ದೇಶಗಳಿಗೆ ಕಾರ್ಖಾನೆಗಳ ಪರಿವೀಕ್ಷಣೆ" ಅಧಿಕಾರವನ್ನು ನೀಡಲಾಗಿದೆ. ಆ ಪ್ರಕಾರ ಹಾಗೂ ಕಾರ್ಖಾನೆಗಳ ಅಧಿನಿಯಮದ ನಿಯಮ 8(1)ರ ಅಡಿಯಲ್ಲಿ ಕಾರ್ಖಾನೆಗಳ ಪರಿವೀಕ್ಷಣೆಗೆ ಹಾಗೂ ಕಾರ್ಖಾನೆಗಳ ಅಧಿನಿಯಮವನ್ನು ಪಾಲಿಸದ ಕಾರ್ಖಾನೆಗಳ ವಿರುದ್ಧ ಮೊಕದ್ದಮೆ ಹೂಡಲು ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) ಇವರಿಗೆ ಅಧಿಕಾರ ಇರುತ್ತದೆ. ಇದರಿಂದಾಗಿ ಈ ಹುದ್ದೆಯ ಕರ್ತವ್ಯ ಹಾಗೂ ಜವಾಬ್ದಾರಿಗಳು ಹೆಚ್ಚಾಗಿವೆ. ಅಲ್ಲದೆ, ಈ ಹುದ್ದೆಗೆ ನೋಂದಾಯಿತ ಕಾರ್ಖಾನೆಗಳಲ್ಲಿ ಬಾಲ ಕಾರ್ಮಿಕ ನಿವಾರಣೆ ಅಡಿಯಲ್ಲಿ ಪ್ರಮಾಣೀಕರಿಸುವ ಶಸ್ತ್ರವೈದ್ಯರ ಹೆಚ್ಚುವರಿ ಜವಾಬ್ದಾರಿಯನ್ನು ಸಹ ಈ ಹುದ್ದೆಗೆ ನೀಡಲಾಗಿದೆ. ಕೇಂದ್ರ ಸರ್ಕಾರ ಹಾಗೂ ಯುಎನ್‌ಡಿಪಿ (UNDP) ನಿಧಿ ಸಹಾಯದಿಂದ ಇಂಡಸ್ಟ್ರಿಯಲ್ ಹೈಜಿನ್ ಲ್ಯಾಬ್‌ನ್ನು (Industrial Hygiene Lab) ಪ್ರಾರಂಭಿಸುವ ಜವಾಬ್ದಾರಿಯ ಮುಖ್ಯಸ್ಥರೂ ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) ಇವರಾಗಿದ್ದು, ಇದರಿಂದಾಗಿ ಅಪಾಯಕಾರಿ ವಲಯಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಮಿಕರ ವೃತ್ತಿ ಸಂಬಂಧಿ ರೋಗಗಳನ್ನು ಪ್ರಾರಂಭಿಕ ಹಂತದಲ್ಲಿಯೇ ಗುರುತಿಸಲು ಇದು ಸಹಾಯಕಾರಿ ಆಗುತ್ತದೆ. ಈ ಎಲ್ಲಾ ಕಾರಣಗಳಿಂದ ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯ ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) ಈ ಹುದ್ದೆಯನ್ನು ಕಾರ್ಖಾನೆಗಳ ಜಂಟಿ ನಿರ್ದೇಶಕರು (ವೈದ್ಯಕೀಯ) ಹುದ್ದೆ ಎಂದು ಉನ್ನತೀಕರಿಸುವ ಅಗತ್ಯತೆಯನ್ನು ಸರ್ಕಾರವು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 04 ಕಾಬಾಸೇ 2004, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2004**

ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯ ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) ವೇತನ ಶ್ರೇಣಿ ರೂ.9580-14000 ಈ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಕಾರ್ಖಾನೆಗಳ ಜಂಟಿ ನಿರ್ದೇಶಕರು (ವೈದ್ಯಕೀಯ) ವೇತನ ಶ್ರೇಣಿ ರೂ.10620-14960 ಹುದ್ದೆ ಎನ್ನುವುದಾಗಿ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ನಂ. ಎಫ್‌ಡಿ 773 ವೆಚ್ಚ-9/2004, ದಿನಾಂಕ: 2.12.2000 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಮಲಾಕುಮಾರಿ**

ಪಿ.ಆರ್. 1427 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

**ವಿಷಯ:** ಡಾ: ಮಹಮ್ಮದ್ ಇಲಿಯಾಸ್ ಜೆ. ವಿಮಾ ವೈದ್ಯಾಧಿಕಾರಿ, ಕಾರಾವಿ ಯೋ (ವೈ) ಸೇವೆಗಳು ಇವರು ಕರ್ತವ್ಯದಿಂದ ಅನಧಿಕೃತ ಗೈರುಹಾಜರಾದ ಬಗ್ಗೆ - ಇಲಾಖಾ ವಿಚಾರಣೆ.

**ಓದಲಾಗಿದೆ:**
1. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು, ರಾಜಾಜಿನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ಇಎಸ್‌ಐಎಸ್: ಇವಿ:51:2000-01, ದಿನಾಂಕ: 29.12.2000, 15.05.2002, 16.12.2002, 14.01.2004, 26.02.2004 ಮತ್ತು 31.08.2004.
2. ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 70 ಎಲ್‌ಎಸ್‌ಐ 2001, ದಿನಾಂಕ: 07.05.2001.
3. ಸರ್ಕಾರದ ಆದೇಶ ಸಂಖ್ಯೆ: ಕಾಇ 70 ಎಲ್‌ಎಸ್‌ಐ 2001, ದಿನಾಂಕ: 22.02.2003.
4. ವಿಚಾರಣಾಧಿಕಾರಿಗಳು, ವಿಚಾರಣೆ ನಡೆಸಿ ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿ ದಿನಾಂಕ: 28.04.2004.
5. ಎರಡನೇ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 70 ಎಲ್‌ಎಸ್‌ಐ 2001, ದಿನಾಂಕ: 08.06.2004.
6. ಆಪಾದಿತ ವೈದ್ಯಾಧಿಕಾರಿಗಳ ಲಿಖಿತ ಹೇಳಿಕೆ ದಿನಾಂಕ: 26.7.2004.

**ಪ್ರಸ್ತಾವನೆ:**

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು, ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 29.12.2000ದ ಪತ್ರದಲ್ಲಿ ಡಾ: ಮಹಮ್ಮದ್ ಇಲಿಯಾಸ್ ಜೆ. ವಿಮಾ ವೈದ್ಯಾಧಿಕಾರಿ ಕಾರಾವಿ ಆಸ್ಪತ್ರೆ, ಮೈಸೂರು ಇವರು ದಿನಾಂಕ: 20.6.2000 ದಿಂದ 60 ದಿನಗಳ ಗಳಿಕೆ ರಜೆ ದಿನಾಂಕ: 20.08.2000 ದಿಂದ 60 ದಿನಗಳ ಗಳಿಕೆ ರಜೆ ದಿನಾಂಕ: 18.10.2000 ದಿಂದ 180 ದಿನಗಳ ಸಂಯುಕ್ತ ರಜೆ ಮಂಜೂರು ಮಾಡಬೇಕೆಂದು ಕೋರಿ ಅರ್ಜಿ ಸಲ್ಲಿಸಿದ್ದರೆಂದು ಸದರಿ ಅರ್ಜಿಗಳನ್ನು ತಿರಸ್ಕರಿಸಿ ಕೂಡಲೇ ಕರ್ತವ್ಯಕ್ಕೆ ಹಾಜರಾಗಬೇಕೆಂದು ಸೂಚಿಸಲಾಗಿದ್ದರೂ ಸಹ ಅವರು ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದರೆಂದೂ ತಿಳಿಸುತ್ತಾ ಸದರಿ ವೈದ್ಯರ ವಿರುದ್ಧ ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ರಡಿ ಇಲಾಖೆ ವಿಚಾರಣೆ ಕೈಗೊಳ್ಳುವಂತೆ ಕೋರಿದ್ದರು ಸದರಿ ವೈದ್ಯರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಕರಡು ದೋಷಾರೋಪಣಾ ಪಟ್ಟಿಯನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ: 07.05.2001ರ ನೋಟೀಸಿನೊಂದಿಗೆ ಜಾರಿ ಮಾಡಿ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಆದರೆ ವೈದ್ಯರು ನಿಗದಿತ ಅವಧಿಯೊಳಗೆ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೆ, ದಿನಾಂಕ: 14.09.2001ರ ಪೂರ್ವಾಹ್ನ ಸೇವೆಗೆ ವರದಿ ಮಾಡಿಕೊಳ್ಳುವುದಾಗಿ ತಿಳಿಸಿದ್ದರೂ ಕರ್ತವ್ಯಕ್ಕೆ ಹಾಜರಾಗಿಲ್ಲ. ಆದ್ದರಿಂದ ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಡಾ: ಮಹಮ್ಮದ್ ಇಲಿಯಾಸ್ ಜೆ. ವಿಮಾ ವೈದ್ಯಾಧಿಕಾರಿ ಕಾರಾವಿ ಆಸ್ಪತ್ರೆ, ಮೈಸೂರು ಇವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರನುಸಾರ ಇಲಾಖಾ ವಿಚಾರಣೆ ನಡೆಸಲು ಶ್ರೀ ಕೃಷ್ಣನಾಯಕ್, ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಶ್ರೀನಿವಾಸಯ್ಯ ಲೇಕ್ಕಾಧೀಕ್ಷಕರು ಕಾರಾವಿ ಯೋ (ವೈ) ಸೇವೆಗಳ ನಿರ್ದೇಶನಾಲಯ, ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು.

ಶ್ರೀ ಕೆ. ಕೃಷ್ಣನಾಯಕ್ ನಿವೃತ್ತಿ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಹಾಗೂ ವಿಚಾರಣಾಧಿಕಾರಿಗಳು ಮೈಸೂರು ಇವರು ಮೇಲೆ (4) ರಲ್ಲಿ ಓದಲಾದ ತಮ್ಮ ಪತ್ರದೊಂದಿಗೆ ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಆಪಾದಿತ ನೌಕರರ ವಿರುದ್ಧ ಮಾಡಲಾಗಿರುವ ಆರೋಪಗಳು

ಸಾಬೀತಾಗಿರುವುದಾಗಿ ಅಭಿಪ್ರಾಯಪಟ್ಟಿರುತ್ತಾರೆ. ಇಲಾಖಾ ವಿಚಾರಣೆಗೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿದಾಗ ಆಪಾದಿತ ಸರ್ಕಾರಿ ನೌಕರನು ದಿನಾಂಕ: 08.10.2003 ರಂದು ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಿದ್ದು ಆ ನಂತರ ನಡೆದ ಇಲಾಖಾ ವಿಚಾರಣೆಗಳಿಗೆ ಗೈರು ಹಾಜರಾಗಿರುತ್ತಾರೆ ಹಾಗೂ ಷೋಕಾಸ್ ನೋಟೀಸಿಗೆ ಉತ್ತರಿಸಿರುವುದಿಲ್ಲ. ವಿಚಾರಣಾಧಿಕಾರಿಗಳು ಸಾಕ್ಷಿಗಳ ಹೇಳಿಕೆ ಹಾಗೂ ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ಆಪಾದನೆಗಳು ಸಾಬೀತಾಗಿರುವುದಾಗಿ ಅಭಿಪ್ರಾಯ ನೀಡಿದ್ದಾರೆ. ವಿಚಾರಣಾಧಿಕಾರಿಗಳು ಸಲ್ಲಿಸಿದ ವಿಚಾರಣಾ ವರದಿಯ ಪ್ರತಿಯನ್ನು ಆಪಾದಿತ ಸರ್ಕಾರಿ ನೌಕರನಿಗೆ ಮೇಲೆ (5) ರಲ್ಲಿ ಓದಲಾದ ನೋಟಿಸಿನೊಂದಿಗೆ ನಿರ್ದೇಶಕರು ಕಾರಾವಿ ಇವರ ಮೂಲಕ ಕಳುಹಿಸಿ ವಿಚಾರಣೆ ವರದಿಯನ್ನು ಏಕೆ ಒಪ್ಪಿಕೊಳ್ಳಬಾರದೆಂಬ ಬಗ್ಗೆ ಅಹವಾಲನ್ನು ಸಲ್ಲಿಸುವುದಿದ್ದರೆ ನೋಟೀಸ್ ತಲುಪಿದ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಡಾ: ಮಹಮ್ಮದ್ ಇಲಿಯಾಸ್ ಜೆ. ಇವರು ದಿನಾಂಕ: 26.07.2004 ರಂದು ಸರ್ಕಾರದ ದಿನಾಂಕ: 8.6.2004ರ ನೋಟೀಸ್‌ಗೆ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ತಮ್ಮ ರಕ್ಷಣಾ ಹೇಳಿಕೆಯಲ್ಲಿ ವಿಚಾರಣಾಧಿಕಾರಿಗಳು ನೀಡಿರುವ ಅಭಿಪ್ರಾಯವನ್ನು ತಾವು ಒಪ್ಪುವುದಿಲ್ಲವೆಂದು ತಿಳಿಸಿರುತ್ತಾರೆ. ಆದರೆ ವಿಚಾರಣಾ ವರದಿಯನ್ನು ಒಪ್ಪದಿರುವ ಬಗ್ಗೆ ಯಾವುದೇ ಸಮರ್ಥನೀಯ ಕಾರಣಗಳು ಹಾಗೂ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ.

ಡಾ: ಮಹಮ್ಮದ್ ಇಲಿಯಾಸ್ ಜೆ. ಇವರ ಅನಧಿಕೃತ ಗೈರುಹಾಜರಾತಿಗೆ ಸಂಬಂಧಿಸಿದಂತೆ ಮಾಡಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವುದರಿಂದ ಹಾಗೂ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ವೈದ್ಯರು ನೀಡಿರುವ ರಕ್ಷಣಾ ಹೇಳಿಕೆಯಲ್ಲಿ ವಿಚಾರಣಾ ವರದಿಯನ್ನು ಪರಿಗಣಿಸದೇ ಇರಲು ಯಾವುದೇ ಸಮರ್ಥನೀಯ ಕಾರಣಗಳನ್ನು ನೀಡಿಲ್ಲದೇ ಇರುವುದರಿಂದ ಹಾಗೂ ಅವರ ಅನಧಿಕೃತ ಗೈರುಹಾಜರಾತಿಯು 4 ತಿಂಗಳಿಗೂ ಹೆಚ್ಚಿನ ಅವಧಿಯದ್ದಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 108 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (viii)ರ ಪ್ರಕಾರ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 70 ಎಲ್‌ಎಸ್‌ಐ 2001, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಡಾ: ಮಹಮ್ಮದ್ ಇಲಿಯಾಸ್ ಜೆ. ವಿಮಾ ವೈದ್ಯಾಧಿಕಾರಿ, ಕಾರ್ಮಿಕ ರಾಜ್ಯ ವಿಮಾ ಆಸ್ಪತ್ರೆ, ಮೈಸೂರು ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಮಾಡಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವುದರಿಂದ ಹಾಗೂ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ವೈದ್ಯರು ನೀಡಿರುವ ರಕ್ಷಣಾ ಹೇಳಿಕೆಯಲ್ಲಿ ವಿಚಾರಣಾ ವರದಿಯನ್ನು ಪರಿಗಣಿಸದೇ ಇರಲು ಯಾವುದೇ ಸಮರ್ಥನೀಯ ಕಾರಣಗಳನ್ನು ನೀಡಿಲ್ಲದೆ ಇರುವುದರಿಂದ ಹಾಗೂ ಇವರ ಅನಧಿಕೃತ ಗೈರುಹಾಜರಾತಿಯು 04 ತಿಂಗಳಿಗೂ ಹೆಚ್ಚಿನ ಅವಧಿಯದ್ದಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (viii) ಪ್ರಕಾರ ಇವರಿಗೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ. ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ್**

ಪಿ.ಆರ್. 1429 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ವಿ.ಎಸ್. ರಾಘವೇಂದ್ರನ್, ಪ್ರ.ದ.ಸ., ಜಿಲ್ಲಾಧಿಕಾರಿಗಳ ಕಛೇರಿ, ಕೋಲಾರ, 2) ಡಿ. ರಂಗಯ್ಯ, ಕಂ.ನಿ.ಕೋರ ಹೋಬಳಿ, ತುಮಕೂರು ಜಿಲ್ಲೆ. 3) ಪಿ. ಪುಟ್ಟಸ್ವಾಮಪ್ಪ, ಪ್ರ.ದ.ಸ. ತಾ. ಕಛೇರಿ ಚಿಕ್ಕಮಂಗಳೂರು ಮತ್ತು 4) ಶ್ರೀ ತಿಮ್ಮಾಭೋವಿ ಪ್ರ.ದ.ಸ., ತಾ.ಪಂ ಕಡೂರು ಇವರಿಗೆ ಶಿರಸ್ತೇದಾರ್: ಉಪ ತಹಶೀಲ್ದಾರ್ ವೃಂದಕ್ಕೆ ಪದೋನ್ನತಿ ನೀಡುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ ಅವರ ಪತ್ರ ಸಂಖ್ಯೆ: ಸಿಬ್ಬಂದಿ 1. ಸಿಆರ್.82:03-04, ದಿನಾಂಕ: 24.9.2003 ಮತ್ತು ದಿನಾಂಕ: 29.4.2004.
2. ಜಿಲ್ಲಾಧಿಕಾರಿಗಳು ತುಮಕೂರು ಜಿಲ್ಲೆ ಅವರ ಪತ್ರ ಸಂಖ್ಯೆ: ಸಿಬ್ಬಂದಿ.(1) ವಿವ.78:04-05, ದಿನಾಂಕ: 24.6.2004 ಹಾಗೂ ದಿನಾಂಕ: 19.7.2004.
3. ಜಿಲ್ಲಾಧಿಕಾರಿಗಳು ಚಿಕ್ಕಮಂಗಳೂರು ಜಿಲ್ಲೆ ಅವರ ಪತ್ರ ಸಂಖ್ಯೆ: ಇಎಸ್‌ಟಿ (2) ಸಿಆರ್.34:2003-2004, ದಿನಾಂಕ: 25.03.2004.
4. ಶ್ರೀ ತಿಮ್ಮಾಭೋವಿ, ಪ್ರ.ದ.ಸ. ತಾ.ಪಂ. ಕಛೇರಿ, ಕಡೂರು ಅವರ ಮನವಿ ದಿನಾಂಕ: 27.4.2004.

**ಪ್ರಸ್ತಾವನೆ:**

ಪ್ರ.ದ. ಸಹಾಯಕ: ಪ್ರ.ದ.ರಾ.ನಿ, ರಿಂದ ಶಿರಸ್ತೇದಾರ ವೃಂದಕ್ಕೆ ಮುಂಬಡ್ತಿಯಿಂದ ಕೈಬಿಟ್ಟಿರುವ ಪ್ರಕರಣಗಳ ಬಗ್ಗೆ ಓದಲಾದ 1 ರಿಂದ 3 ರಲ್ಲಿ ಜಿಲ್ಲಾಧಿಕಾರಿಗಳು ಕೋಲಾರ, ತುಮಕೂರು ಮತ್ತು ಚಿಕ್ಕಮಂಗಳೂರು ಜಿಲ್ಲೆ ಇವರುಗಳು ವಿಭಾಗಾಧಿಕಾರಿ ಹುದ್ದೆಗಳು ರದ್ದಾದ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಸದರಿ ಪ್ರಸ್ತಾವನೆಯಲ್ಲಿ ಲೋಕಾಯುಕ್ತ ಪ್ರಕರಣ ಬಾಕಿ ಇದ್ದುದರಿಂದ ಆಯಾ ವಿಭಾಗಾಧಿಕಾರಿಗಳು ಶಿರಸ್ತೇದಾರ ವೃಂದಕ್ಕೆ ಮುಂಬಡ್ತಿಗೆ ಪರಿಗಣಿಸುವಾಗ ಸಂಬಂಧಿಸಿದ ನೌಕರರುಗಳನ್ನು ಸೀಲ್ಡ್ ಕವರಿನಲ್ಲಿಡಲಾಗಿತ್ತು. ಈ ನೌಕರರುಗಳ ಮೇಲಿನ ಲೋಕಾಯುಕ್ತ ಪ್ರಕರಣಗಳು ಇತ್ಯರ್ಥಗೊಂಡು ದೋಷಮುಕ್ತರಾದ ಹಿನ್ನೆಲೆಯಲ್ಲಿ ಈ ಕೆಳಕಂಡ ನೌಕರರುಗಳಿಗೆ ಜೇಷ್ಠತೆಯಲ್ಲಿ ಅವರಗಿಂತ ಕಿರಿಯ ನೌಕರರಿಗೆ ಮುಂಬಡ್ತಿ ನೀಡಿದ ದಿನಾಂಕದಿಂದ ಜಾರಿಗೆ ಬರುವಂತೆ ಶಿರಸ್ತೇದಾರ ವೃಂದಕ್ಕೆ ಮುಂಬಡ್ತಿ ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

| ಕ್ರ.ಸಂ. | ಹೆಸರು ಮತ್ತು ವಿವರ | ಲೋಕಾಯುಕ್ತ ಪ್ರಕರಣದಲ್ಲಿ ದೋಷಮುಕ್ತ ವಿವರ |
|---|---|---|
| 1) | ಶ್ರೀ ರಾಘವೇಂದ್ರನ್ ಪ್ರದಸ, ಡಿ.ಸಿ. ಕಛೇರಿ ಕೋಲಾರ (ಬೆಂಗಳೂರು ವಿಭಾಗದ ಪ್ರದಸ: ಕಂನಿ ಜೇಷ್ಠತಾ ಪಟ್ಟಿಯ ಪ್ರಕಾರ ಇವರ ಕ್ರಮ ಸಂ.2459 ಇದ್ದು, ಇವರ ಜೇಷ್ಠತೆಗಿಂತ ಕಿರಿಯ ಜೇಷ್ಠತೆ ಹೊಂದಿದ ಶ್ರೀ ಕೆ. ಮರುಳಸಿದ್ದಯ್ಯ ರವರ ಜೇಷ್ಠತೆ ಕ್ರ.ಸಂ.2461 ಇವರಿಗೆ ಖಾಯಂ ಆಗಿ ದಿ: 5.5.01 ರಿಂದ ಶಿರಸ್ತೆದಾರ ವೃಂದಕ್ಕೆ ಮುಂಬಡ್ತಿ ನೀಡಿದ ದಿನಾಂಕದಿಂದ ಮುಂಬಡ್ತಿಗೆ ಪರಿಗಣಿಸಬೇಕಾಗಿರುತ್ತದೆ). | ಲೋಕಾಯುಕ್ತಕ್ಕೆ ಸಂಬಂಧಿಸಿದ ಸಿಸಿ ಸಂಖ್ಯೆ 5:98 ದಿ: 28.8.2003 ರನ್ವಯ ಸದರಿ ನೌಕರರ ವಿರುದ್ಧದ ಆರೋಪದಿಂದ ಖುಲಾಸೆಗೊಳಿಸಲಾಗಿದೆ. |
| 2) | ಡಿ. ರಂಗಯ್ಯ, ಕಂ.ನಿ, ಕೋರಾ ಹೋಬಳಿ ತುಮಕೂರು ಜಿಲ್ಲೆ (ಬೆಂಗಳೂರು ವಿಭಾಗದ ಪ್ರದಸ:ರಾ.ನಿ. ಜೇಷ್ಠತಾ ಪಟ್ಟಿಯ ಕ್ರ.ಸಂ.2633 ಆಗಿದ್ದು ಜೇಷ್ಠತೆಗಿಂತ ಕಿರಿಯರಾದ ಶ್ರೀಮತಿ ಭಾರತಿ ಜೇಷ್ಠತಾ ಪಟ್ಟಿ ಸಂ:2634 ಇವರಿಗೆ 5.5.2001 ರಿಂದ ಶಿರಸ್ತೇದಾರ ವೃಂದಕ್ಕೆ ಮುಂಬಡ್ತಿ ನೀಡಿರುವುದರಿಂದ ಆ ದಿನಾಂಕದಿಂದ ಮುಂಬಡ್ತಿ ಪರಿಗಣಿಸಬೇಕಾಗುತ್ತದೆ.) | ಜೆ.ಎಂ.ಎಫ್.ಸಿ. ತುಮಕೂರು, ನ್ಯಾಯಾಲಯದಲ್ಲಿ ಕ್ರಿಮಿನಲ್ ಪ್ರಕರಣ ಸಂಖ್ಯೆ: ಸಿಸಿ 3037/77 (2) ಸಿಸಿ 4380:87 ಮತ್ತು ಸಿಸಿ 4386:87 ದಿನಾಂಕ: 31.12.2003 ರಂದು ಈ ಮೂರು ಪ್ರಕರಣಗಳು ಅಂತಿಮ ಇತ್ಯರ್ಥವಾಗಿ ನೌಕರರನ್ನು ಆರೋಪಗಳಿಂದ ಖುಲಾಸೆಗೊಳಿಸಿದೆ. |
| 3) | ಪಿ. ಪುಟ್ಟಸ್ವಾಮಪ್ಪ, ಪ್ರ.ದ.ಸ. ತಾ. ಕಛೇರಿ ಚಿಕ್ಕಮಗಳೂರು (ಇವರು ಮೈಸೂರು ವಿಭಾಗದ ಪ್ರ.ದ.ಸ:ಕಂ.ನಿ. ಜೇಷ್ಠತಾ ಪಟ್ಟಿ ಕ್ರ.ಸಂ.2075 ಆಗಿದ್ದು ಇವರ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ವಿ. ಶೇಖರಪ್ಪ ಜೇಷ್ಠತೆಯ ಕ್ರಮ ಸಂಖ್ಯೆ:2076 ಇವರಿಗೆ ದಿ: 28.8.2001 ರಿಂದ ಮುಂಬಡ್ತಿ ನೀಡಿರುವುದರಿಂದ, ಅದೇ ದಿನಾಂಕದಿಂದ ಮುಂಬಡ್ತಿ ಪರಿಗಣಿಸಬೇಕಾಗುತ್ತದೆ). | ಲೋಕಾಯುಕ್ತ ಪ್ರಕರಣದ ಬಗ್ಗೆ ಸರ್ಕಾರದ ಆದೇಶ ಸಂ.ಕಂ.ಇ. 65 ಬಿಡಿಪಿ 99, ದಿ: 30.12.03 ರಲ್ಲಿ ಸದರಿ ನೌಕರರ ಮೇಲಿನ ಆರೋಪಗಳನ್ನು ದೋಷ ಮುಕ್ತಗೊಳಿಸಿ ಆದೇಶಿಸಿದೆ. |
| 4) | ಶ್ರೀ ತಿಮ್ಮಾಭೋವಿ ಪ್ರ.ದ.ಸ. ತಾಲ್ಲೂಕು ಪಂಚಾಯತ್ ಕಛೇರಿ ಕಡೂರು ಚಿಕ್ಕಮಂಗಳೂರು ಜಿಲ್ಲೆ. (ಮೈಸೂರು ವಿಭಾಗದ ಪ್ರದಸ, ಜೇಷ್ಠತಾ ಪ.ಕ್ರ.ಸಂ.2175 ಆಗಿದ್ದು ಇವರ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಸಿ.ಜಿ. ಅಮರನಾಥ ಜೇಷ್ಠತಾ ಪ್ರ.ಕ.ಸಂ.2185 ಇವರಿಗೆ ದಿ:1.2.2003 ರಿಂದ ಶಿರಸ್ತೇದಾರ್ ವೃಂದಕ್ಕೆ ಮುಂಬಡ್ತಿ ನೀಡಿರುವುದರಿಂದ ಆ ದಿನಾಂಕದಿಂದಲೇ ಮುಂಬಡ್ತಿಗೆ ಪರಿಗಣಿಸಬೇಕಾಗಿರುತ್ತದೆ). | ಲೋಕಾಯುಕ್ತ ಪ್ರಕರಣದ ಬಗ್ಗೆ ಚಿಕ್ಕಮಂಗಳೂರು ಜಿಲ್ಲಾ ಸತ್ರ ನ್ಯಾಯಾಲಯದ ಸಂ.6:96 ದಿ:27.7.03ರ ತೀರ್ಪಿನಲ್ಲಿ ಸದರಿ ನೌಕರರನ್ನು ಮೇಲಿನ ಆರೋಪಗಳಿಂದ ಮುಕ್ತಗೊಳಿಸಿದೆ. |

ಈ ಮೇಲಿನ ನೌಕರರ ಮೇಲೆ ಯಾವುದೇ ಇಲಾಖಾ ವಿಚಾರಗಳು ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ. ಸಂಬಂಧಿಸಿ ನ್ಯಾಯಾಲಯ ಪ್ರಕರಣಗಳು ಮೇಲ್ಮನವಿಗೆ ದಾಖಲಿಸಲು ಯೋಗ್ಯ ಪ್ರಕರಣವಲ್ಲವೆಂದು ಕಾನೂನು ಇಲಾಖೆ ಅಭಿಪ್ರಾಯ ನೀಡಿದೆ ಸದರಿಯವರು ಮುಂಬಡ್ತಿ ಪಡೆಯಲು ಅರ್ಹರಾಗಿರುತ್ತಾರೆಂದು ಸಂಬಂಧಿಸಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ವಿಭಾಗಾಧಿಕಾರಿಗಳ ಕಛೇರಿಗಳು ದಿನಾಂಕ: 1.4.2003 ರಿಂದ ರದ್ದುಗೊಳಿಸಿರುವುದರಿಂದ ಮೇಲೆ ನೀಡಿದ ವಿವರಗಳ ಹಿನ್ನಲೆಯಲ್ಲಿ ಇಲಾಖಾ ಮುಂಬಡ್ತಿಯಿಂದ ಕೈಬಿಟ್ಟು ಹೋಗಿರುವ ಈ ಮೇಲಿನ 4 ಪ್ರಕರಣಗಳಲ್ಲಿ ಆಯಾಯ ನೌಕರರಿಗೆ ಜೇಷ್ಠತೆಯಲ್ಲಿ ಕಿರಿಯರಾದ ನೌಕರರಿಗೆ ಶಿರಸ್ತೇದಾರರಾಗಿ ಮುಂಬಡ್ತಿ ನೀಡಿದ ದಿನಾಂಕದಿಂದ ಶಿರಸ್ತೇದಾರರಾಗಿ ಮುಂಬಡ್ತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 434 ಬಿಎಂಎಂ 2003, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಇಲಾಖಾ ಮುಂಬಡ್ತಿಯಿಂದ ಕೈಬಿಟ್ಟು ಹೋಗಿರುವ ನೌಕರರಾದ ಶ್ರೀ ವಿ.ಎಸ್. ರಾಘವೇಂದ್ರನ್, ಶ್ರೀ ಡಿ. ರಂಗಯ್ಯ ಶ್ರೀ ಪಿ. ಪುಟ್ಟಸ್ವಾಮಪ್ಪ, ಶ್ರೀ ತಿಮ್ಮಾಭೋವಿ, ಪ್ರ.ದ.ಸ:ಕಂನಿ. ಇವರುಗಳಿಗೆ ಈ ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದನ್ವಯ ಇವರ ಮೇಲಿನ ಕ್ರಿಮಿನಲ್/ಇಲಾಖಾ ವಿಚಾರಣೆಗಳು ಅಂತಿಮವಾಗಿ ಇತ್ಯರ್ಥಗೊಂಡು ಇವರುಗಳನ್ನು ಅಪಾದನೆಗಳಿಂದ ಮುಕ್ತರನ್ನಾಗಿ ಮಾಡಿರುವ ಪ್ರಯುಕ್ತ ಸದರಿಯವರಿಗೆ ಜೇಷ್ಠತೆಯಲ್ಲಿ ಕಿರಿಯರಾದ ನೌಕರರಿಗೆ ಶಿರಸ್ತೇದಾರರಾಗಿ ಮುಂಬಡ್ತಿ ನೀಡಿದ ದಿನಾಂಕದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.5,200 ರಿಂದ 9,580 ರಲ್ಲಿ ಶಿರಸ್ತೇದಾರ್/ಉಪ ತಹಸೀಲ್ದಾರ್ ಹುದ್ದೆಗೆ ಮುಂಬಡ್ತಿ, ನೀಡಿ ಆದೇಶಿಸಿದೆ. ಹಾಗೂ ಇವರನ್ನು ಸಂಬಂಧಿಸಿದ ಆಯಾಯ ಜಿಲ್ಲಾಧಿಕಾರಿಗಳಾದ ಕೋಲಾರ, ತುಮಕೂರು, ಚಿಕ್ಕಮಂಗಳೂರು ಜಿಲ್ಲೆಗಳಲ್ಲಿ ಖಾಲಿ ಇರುವ ಶಿರಸ್ತೇದಾರ್ / ತತ್ಸಮಾನ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲು ಜಿಲ್ಲಾಧಿಕಾರಿಗಳಿಗೆ ಆದೇಶಿಸಿದೆ.

| ಕ್ರ.ಸಂ. | ಸಿಬ್ಬಂದಿ ಹೆಸರು ಹುದ್ದೆ ಮತ್ತು ಕಾರ್ಯಾಲಯ | ಪೂರ್ವಾನ್ವಯವಾಗಿ ಮುಂಬಡ್ತಿ ನೀಡಿದ ದಿನಾಂಕ |
|---|---|---|
| 1. | ಶ್ರೀ ವಿ.ಎಸ್. ರಾಘವೇಂದ್ರನ್,<br>ಪ್ರ.ದ.ಸ. ಜಿಲ್ಲಾಧಿಕಾರಿಗಳ ಕಛೇರಿ, ಕೋಲಾರ. | 05.05.2001 |
| 2. | ಶ್ರೀ ಡಿ. ರಂಗಯ್ಯ,<br>ಕಂ.ನಿ. ಕೋರಾ ಹೋಬಳಿ, ತುಮಕೂರು ತಾಲ್ಲೂಕು. | 05.05.2001 |
| 3. | ಶ್ರೀ ಪಿ. ಪುಟ್ಟಸ್ವಾಮಪ್ಪ<br>ಪ್ರದಸ, ತಾಲ್ಲೂಕು ಕಛೇರಿ, ಚಿಕ್ಕಮಗಳೂರು. | 28.08.2001 |
| 4. | ಶ್ರೀ ತಿಮ್ಮಾಬೋವಿ,<br>ಪ್ರದಸ, ತಾಲ್ಲೂಕು ಪಂಚಾಯತ್ ಕಛೇರಿ, ಕಡೂರು, ಚಿಕ್ಕಮಂಗಳೂರು ಜಿಲ್ಲೆ. | 01.02.2003 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 1424

ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು).